ರಾಷ್ಟ್ರಕವಿ ಗೋವಿಂದ ಪೈ ಜನ್ಮಶತಾಬ್ದಿ ಸಮಿತಿಯ ಪ್ರಕಟಣೆ

# ಗೋವಿಂದ ಪೈ:
# ಸಮಗ್ರ ವಾಙ್ಮಯ ಸಮೀಕ್ಷೆ

ಶ್ರೀನಿವಾಸ ಹಾವನೂರ

೧೯೮೩

ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ
ಶತಮಾನೋತ್ಸವ ಕೇಂದ್ರ ಸಮಿತಿ

ಉಡುಪಿ - 576 102

*GOVINDA PAI: SAMAGRA VANGMAYA SAMIKSE*. By Dr. Shrinivasa Havanur, Mangalore University, Mangalagangotri-574 152. D.K. Dist. Pages 96. Publishers: Rashtrakavi Govind Pai Shatamanotsava Kendra Samithi.

ಬೆಲೆ: ರೂಪಾಯಿ 6

ಪ್ರತಿಗಳಿಗೆ:

ಅತ್ರಿ ಬುಕ್ ಸೆಂಟರ್, ಬಲ್ಮಠ, ಮಂಗಳೂರು
ಗೀತಾ ಬುಕ್ ಹೌಸ್, ಮೈಸೂರು
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ,
ಉಡುಪಿ–576 102.

## ಪರಿವಿಡಿ

## ಪ್ರಕಾಶನದ ವತಿಯಿಂದ

ಸುಮಾರು 15 ವರ್ಷ ಪೂರ್ವದಲ್ಲಿ ನಮ್ಮ ಕೇಂದ್ರ ಪ್ರಕಟಿಸಿದ ಗೋವಿಂದ ಪೈ ವಾಙ್ಮಯ ದರ್ಶನಕ್ಕೆ ಡಾ॥ ಶ್ರೀನಿವಾಸ ಹಾವನೂರರು ಬರೆದ ಮುಮ್ಮಾತುಗಳನ್ನು ರಾಷ್ಟ್ರಕವಿಯ ಜನ್ಮಶತಾಬ್ದಿ ವರ್ಷದ ದ್ವಿತೀಯ ಪ್ರಕಟನೆಯಾಗಿ ಹೊರತಂದಿದ್ದೇವೆ. ದಿವಂ. ಪೈ ಅವರ ಸಮಗ್ರ ಕೃತಿಗಳ ಸೂಕ್ಷ್ಮ ಪರಿಚಯ ಈ ಚಿಕ್ಕ ಗ್ರಂಥದಲ್ಲಿ ದೊರೆಯುವುದು ಮಾತ್ರವಲ್ಲದೆ ಪೈ ಅವರ ಕೃತಿಗಳ ಖಚಿತ ಸಮೀಕ್ಷೆಯ ಪ್ರಯತ್ನವನ್ನೂ ಇಲ್ಲಿ ಕಾಣ ಬಹುದಾಗಿದೆ. ಆ ದೃಷ್ಟಿಯನ್ನಿಟ್ಟುಕೊಂಡು ಲೇಖಕರು ಈ ಹಿಂದೆ ಬರೆದದ್ದನ್ನು ಪರಿಷ್ಕರಿಸಿ ಕೆಲವು ಹೊಸ ಮಾತುಗಳನ್ನು ಸೇರಿಸಿದ್ದಾರೆ.

ಇದನ್ನು ನಮಗೆ ಒಪ್ಪಿಸಿದ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ॥ ಶ್ರೀನಿವಾಸ ಹಾವನೂರರಿಗೂ, ಅಂದವಾಗಿ ಮುದ್ರಿಸಿಕೊಟ್ಟ ಶಾರದಾ ಮುದ್ರಣಾಲಯದವರಿಗೂ ಕೇಂದ್ರವು ಆಭಾರಿ ಯಾಗಿದೆ.

28—1—1983. —ಕು. ಶಿ. ಹರಿದಾಸ ಭಟ್ಟ

## ೧. ಪೀಠಿಕೆ

ದಿವಂಗತ ಗೋವಿಂದ ಪೈ ಅವರ ಮೊತ್ತಮೊದಲಿನ ಬರೆಹವು ಕ್ರಿ.ಶ. ೧೯೦೦ರಲ್ಲಿ, ಸುವಾಸಿನಿ ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ೧೯೬೨ರಲ್ಲಿ ಪ್ರಬುದ್ಧ ಕರ್ಣಾಟಕಕ್ಕೆ ಕಳಿಸಿದ ಮಂಜೇಶ್ವರ ದೇವಸ್ಥಾನದ ಮೇಲಿನ ಲೇಖವು, ಅವರ ಕೊನೆಯ ಬರವಣಿಗೆಯಾಯಿತು. ಹೀಗೆ ೬೨ ವರ್ಷಗಳ ಸುದೀರ್ಘಕಾಲದ ವರೆಗೆ, ಏಕಪ್ರಕಾರವಾಗಿ ವಾಙ್ಮಯ ಸೇವೆಯಲ್ಲಿ ತೊಡಗಿದ್ದ ಕನ್ನಡ ಸಾಹಿತಿ ಎಂದರೆ ಪೈಯವರೊಬ್ಬರೇ. ಜೊತೆಗೆ, ಅವರ ಬರವಣಿಗೆಯು ಪ್ರಗಲ್ಭವೂ, ಮೌಲಿಕವೂ ಆದುದರಿಂದ, ಹೊಸಗನ್ನಡದ ಹಿರಿಯ ತಲೆಮಾರಿನ ಸಾಹಿತ್ಯಿಕರಲ್ಲಿ ಅವರು ಅಗ್ರಗಣ್ಯರೆಂದು ಗಣಿಸಲ್ಪಡುತ್ತಿದ್ದಾರೆ.

ಪೈ ಅವರ ಸಾಹಿತ್ಯವಾಹಿನಿಯು ಇತಿಹಾಸ ಸಂಶೋಧನ, ಪ್ರಬಂಧ–ವಿಮರ್ಶೆ, ಕವಿತೆ ಮತ್ತು ನಾಟಕ—ಈ ನಾಲ್ಕೂ ಮಾರ್ಗಗಳಲ್ಲಿ ಪ್ರವಹಿಸಿತು[1]. ಪ್ರಸ್ತುತ ಗ್ರಂಥದಲ್ಲಿ, ಅವರು ಯಾವ ಯಾವ ವಿಷಯಗಳ ಮೇಲೆ ಸಂಶೋಧನೆ ಅಥವಾ ವಿವೇಚನೆ ಮಾಡಿದ್ದಾರೆ ಮತ್ತು ಅವರ ಕವಿತೆ, ನಾಟಕಗಳ ಸ್ವರೂಪವೆಂತಹದು—ಎಂಬುದನ್ನು ಬೆರಳಿಟ್ಟು ತೋರಿಸುವ ಪ್ರಯತ್ನವನ್ನು ಮಾಡಿದ್ದಾಗಿದೆ. ಇದು ಅವರ ಸಾಹಿತ್ಯದ ವ್ಯಾಪ್ತಿಯನ್ನು ಆದಷ್ಟು ವಸ್ತುನಿಷ್ಠವಾಗಿ ವಿವರಿಸುವ ರೇಖಾ

---

[1]ನಮಗೆ ದೊರೆತಿರುವ ಮಟ್ಟಿಗೆ ಪೈಯವರ ಸಣ್ಣ–ದೊಡ್ಡ ಗದ್ಯ ಪ್ರಬಂಧಗಳ ಸಂಖ್ಯೆಯು 185; ಕವಿತೆಗಳದ್ದು 150. ಅವರು ಹಲವು ಪ್ರಬಂಧಗಳನ್ನು, ತಿದ್ದಿ ಬೆಳೆಯಿಸಿ ಪುನಹ ಪ್ರಕಟಿಸಿದ್ದಾರೆ. ಅವರ ಕವಿತೆಗಳಲ್ಲಿ ಅರ್ಧದಷ್ಟು, ಬೇರೆಬೇರೆ ಪತ್ರಿಕೆಗಳಲ್ಲಿ ಪುನರ್ಮುದ್ರಣವನ್ನು ಕಂಡಿವೆ. ಅವರು ರಚಿಸಿದ ನಾಟಕಗಳ ಸಂಖ್ಯೆ 12. ಈ ಎಲ್ಲ ಕೃತಿಗಳು ಸುಮಾರು 140 ಕನ್ನಡ, ಇಂಗ್ಲಿಶ್ ಪತ್ರಿಕೆ–ಪುಸ್ತಕಗಳಲ್ಲಿ ಪ್ರಕಟವಾಗಿವೆ.

ಲೇಖವಾಗಿದೆ. ಅವರ ಕೃತಿಗಳ ವಿಮರ್ಶೆ ಅಥವಾ ಆಳವಾದ ಸಮಾಲೋಚನೆ ನಮ್ಮ ಉದ್ದೇಶವಲ್ಲ.

ಪೈಯವರ ಮೊದಲ ಬರೆಹವು ೧೯೦೦ರಲ್ಲಿ ಅಚ್ಚಾಯಿತೆಂದು ಹೇಳಿದೆವಷ್ಟೆ. ಅದು 'ಸುವಾಸಿನಿ'ಯನ್ನು ಕುರಿತ ಪದ್ಯ. ಅದೇ ಹೆಸರಿನ ಪತ್ರಿಕೆಯವರು ಏರ್ಪಡಿಸಿದ ಸ್ಪರ್ಧೆಗಾಗಿ ಬರೆಯಲ್ಪಟ್ಟು ಪ್ರಥಮ ಬಹುಮಾನವನ್ನು ಪಡೆದ ಕವಿತೆಯಿದು. ಇದರ ಅನಂತರ ನಮಗೆ ದೊರೆತಿರುವ ಪೈಯವರ ಆರಂಭದ ಲೇಖ ಗಳೆಂದರೆ, ನವೀನ ಚಂದ್ರಸೇನರ ಬಂಗಾಲೀ ಕೃಷ್ಣಚರಿತೆಯ ಗದ್ಯಾನುವಾದ (೧೯೦೯); ಮತ್ತು 'ಸಿಗಾಲಸುತ್ತ' ಎಂಬ ಬೌದ್ಧ ಸೂತ್ರಗಳ ಅನುವಾದ (೧೯೧೧). ಇವೆರಡೂ ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ ಪ್ರಕಟವಾದುವು.

ತಮ್ಮ ಕಾಲೇಜು ಶಿಕ್ಷಣ ಮುಗಿಸಿ, ಪೈಯವರು ಮಂಜೇಶ್ವರ ದಲ್ಲಿ ನೆಲೆನಿಂತ ಮೇಲೆ ಅವರ ಕವನ ನಿರ್ಮಿತಿಯೂ, ಧರ್ಮ ಮತ್ತು ಚರಿತ್ರೆಗೆ ಸಂಬಂಧಿಸಿದ ವ್ಯಾಸಂಗವೂ ಒಟ್ಟೊಟ್ಟಿಗೆ ಸಾಗಿ ದುವು. ಪ್ರಾಸ ಇಟ್ಟು, ಬಿಟ್ಟು ಪದ್ಯಗಳನ್ನು ರಚಿಸಿದ ಕಾಲವು ಇದೇ (೧೯೧೧). ಆ ಮುಂದೆ, ಮಂಜೇಶ್ವರಕ್ಕೆ ಬರುತ್ತಿದ್ದ ಬುದ್ಧಿಜೀವಿಗಳೊಡನೆ, ಪ್ರಾಕ್ತನ ವಿಷಯಗಳನ್ನು ಚರ್ಚಿಸುವುದ ರಲ್ಲಾಗಲೀ, ಕವಿಚರಿತ್ರಕಾರರೇ ಮೊದಲಾದವರೊಡನೆ ಪತ್ರ ವ್ಯವಹಾರದಲ್ಲಾಗಲೀ, ತೊಡಗಿದ್ದರಾದರೂ, ೧೯೨೦ರ ಮಂಜೇ ಶ್ವರ ದೇವಸ್ಥಾನದ ಪರಿಚಯ ರೂಪೀ ಲೇಖವನ್ನು ಬಿಟ್ಟರೆ ಸಂಶೋಧನದ ಬರೆವಣಿಗೆಗೆ ಅವರಿನ್ನೂ ಮೊದಲುಮಾಡಿರಲಿಲ್ಲ. ೧೯೨೪ರ ಬೆಳಗಾಂವಿ ಸಾಹಿತ್ಯ ಸಮ್ಮೇಳನದ ಕಾಲಕ್ಕೆ, ಅವರು ಒಬ್ಬ ಉದಯೋನ್ಮುಖ ಕವಿ ಎಂಬ ಹೆಸರನ್ನಷ್ಟೆ ಗಳಿಸಿದ್ದರು; ವಿದ್ವಾಂಸ ಲೇಖಕರೆಂದಲ್ಲ.

ಅವರ ಸಂಶೋಧನದ ಬರೆವಣಿಗೆಯು ಆರಂಭವಾದುದು ೧೯೨೬ಕ್ಕೆ. ಮುಂದಣ ಒಂದೊಂದು ವರ್ಷದಲ್ಲಿ ಸುಮಾರು ಏಳೆಂಟು ಸಂಶೋಧನ ವಿಷಯಗಳನ್ನು ಆಯ್ದುಕೊಂಡು ಬರೆ ಯುತ್ತ ಹೋದರು. ಭಾರತೀಯ ಇತಿಹಾಸಕಾರರಿಗೆ ಹೆಚ್ಚು

ಹಿಡಿಸಬಹುದಾದ ಲೇಖನಗಳನ್ನು ಇಂಗ್ಲಿಶ್‌ಗೆ ಅನುವಾದಿಸಿದರು. ಅರಸು ಮನೆತನಗಳ ವಂಶಾವಳಿ, ಕವಿ–ಕಾವ್ಯಗಳ ಕಾಲನಿರ್ಣಯ, ಏತನ್ಮಧ್ಯೆ ಕವಿತಾ ರಚನೆ, ಈ ಕ್ರಮವು ೧೯೪೫ರ ವರೆಗೆ ಹಾಗೆಯೆ ಮುಂದುವರಿಯಿತು.

'ಗಿಳಿವಿಂಡು' ಕವನ ಸಂಗ್ರಹವು ೧೯೩೦ರಲ್ಲಿ ಪ್ರಕಟವಾಯಿತು. ಅನಂತರದ ಕೆಲವು ವರ್ಷಗಳಲ್ಲಿ ಅವರ ಕವಿತಾರಚನೆ ತುಸು ಹಿಮ್ಮೆಟ್ಟಿ ಪ್ರಾಕ್ತನ ಸಂಶೋಧನೆಯಲ್ಲಿ ಅವರು ಮುಳುಗಿ ಬಿಟ್ಟರೆಂದು ಕಾಣುತ್ತದೆ. ಅದನ್ನೆ ಪಾಂಡೇಶ್ವರ ಗಣಪತಿರಾಯರು ತಮ್ಮ 'ಪಂಡಿತವಕ್ಕಿ' ಎಂಬ ಕವನದಲ್ಲಿ, 'ನಿನ್ನೆಗಳ ನೆನೆನೆನೆದು ಮರುಳ ಮೌನದಲಿ ತನ್ನ ತಾನರಿಯದೆಯೆ ಶುಷ್ಕ ವ್ಯಾಜದಲಿ ಹಾಡುವದ ಮರೆತಿಂತು ಕುಳಿತೆಯೊ ಹಕ್ಕಿ?' ಎಂದು ವ್ಯಾಜ ನಿಂದಾಸ್ತುತಿ ರೂಪದಲ್ಲಿ ಕೇಳಿದ್ದಾರೆ. ಅದೇನಿದ್ದರೂ, ಕವಿತೆ ಮತ್ತು ಸಂಶೋಧನೆ ಇವೆರಡರಲ್ಲಿ ನಿಶ್ಚಿತ ಕ್ರಮವನ್ನು ತಾವು ಅನುಸರಿಸಿದವರಲ್ಲ ಎಂಬ ಮಾತನ್ನು ಪೈಯವರೇ ತಮ್ಮ 'ಸಾಹಿತ್ಯಜ್ಞರ ಆತ್ಮಕಥನ'ದಲ್ಲಿ ಹೇಳಿದ್ದಾರೆ.

ನಾಟಕ ಕ್ಷೇತ್ರದಲ್ಲಿ ಪೈಯವರು ಮನಸ್ಸು ತೊಡಗಿಸಿದುದು ಈಚೆಗೆ ಎಂದರೆ ೧೯೪೭–'೪೭ರಲ್ಲಿ, ಆ ಎರಡು–ಮೂರು ವರ್ಷಗಳ ಅವಧಿಯಲ್ಲಷ್ಟೆ ಅವರು ನಾಟಕಗಳನ್ನು ರಚಿಸಿದುದು.

ಹೀಗೆ ೧೯೨೭ರಿಂದ ೧೯೪೭ರ ವರೆಗಿನ ೨೦ ವರ್ಷದ ಅವಧಿಯು ಪೈಯವರ ಬರವಣಿಗೆಯ ಜಾಜ್ವಲ್ಯಮಾನ ಕಾಲವಾಗಿದೆ. ಅನಂತರವೂ ಅವರ ಬರವಣಿಗೆ ಮುನ್‌ಸಾಗಿತಾದರೂ ಅದರದು ಮಂದಗತಿಯೆನ್ನಬಹುದು. ೧೯೫೩ರ ಹೊತ್ತಿಗೆ, ಎಂದರೆ ಅವರ ೭೦ನೆಯ ವಯಸ್ಸಿನ ಸುಮಾರಿಗೆ ಅದು ತೀರ ಕುಂಠಿತವಾಯಿತು. ಕೊನೆಯದಾದ 'ಮಂಜೇಶ್ವರ ದೇವಸ್ಥಾನ' ಲೇಖವು ಬಹು ಪ್ರಯಾಸದಿಂದ ಸಿದ್ಧವಾಯಿತು; ಮತ್ತು ಅದರ ಪ್ರಕಟನೆಯು ಅವರ ಮರಣಾನಂತರವೇ ಆಯಿತು (೧೯೬೪).

ಅವರ ಸಂಶೋಧನ ಮತ್ತು ವಿವೇಚನಾ ಪ್ರಬಂಧಗಳ ವ್ಯಾಪ್ತಿಯನ್ನು ಈ ರೀತಿಯಾಗಿ ರೂಪಿಸಬಹುದು:




## ೨. ಇತಿಹಾಸ ಸಂಶೋಧನೆ

### ಸಾರಸ್ವತರ ಪ್ರಾಚೀನತೆ

ಪೈ ಅವರ ಸಂಶೋಧನ ಬರವಣಿಗೆಯು ೧೯೨೬ರಿಂದ ಆರಂಭವಾಯಿತೆಂದು ಹೇಳಿದೆವಷ್ಟೆ. ಅದಕ್ಕಾಗಿ ಅವರು ಆಯ್ದುಕೊಂಡ ವಿಷಯವು, ಅವರ ಪೂರ್ವಜರಾದ (ಗೌಡ) ಸಾರಸ್ವತರ ಮೂಲೇತಿಹಾಸವನ್ನು ಕುರಿತದ್ದು. ಹಲವು ಪುರಾಣಗಳನ್ನೂ ಶಾಸನಗಳನ್ನೂ ಕೂಲಂಕಷವಾಗಿ ಪರಿಶೀಲಿಸಿ, ಸಾರಸ್ವತರ ಉಲ್ಲೇಖವು ಎಲ್ಲೆಲ್ಲಿ ಬಂದಿದೆ ಎಂಬುದನ್ನು ಗುರುತಿಸಿ, Flashes from the Past ಎಂಬ ಲೇಖವನ್ನು ಅವರು ಬರೆದರು. ಅದೇ ಮುಂದೆ ಘನೀಭೂತವಾಗಿ 'ನಮ್ಮ ಹಿರಿಯರನ್ನು ಕುರಿತು' ಎಂಬ ಲೇಖದಲ್ಲಿ (ಜೀವೋತ್ತಮ, ೧೯೫೫) ನಿರ್ಣಯಾತ್ಮಕ ರೂಪವನ್ನು ತಾಳಿತು. ಇದಕ್ಕೂ ಮುಂಚೆ, ಕೊಂಕಣಿ ಪತ್ರಿಕೆಯಾದ ಸಾರಸ್ವತದಲ್ಲಿ ಈ ವಿಷಯದ ಕುರಿತು ಲೇಖವೊಂದು ಪ್ರಕಟವಾಗಿದ್ದಿತು (೧೯೪೪).

ಪೈಯವರ ಪ್ರಕಾರ, ಸಾರಸ್ವತರು ಮೂಲತಃ ಪಂಜಾಬದ ಸರಸ್ವತೀ ನದೀತೀರದವರು. ಅಲ್ಲಿಂದ ಬಿಹಾರದ ತಿರ್ಹೂತ್ ಪ್ರದೇಶದಲ್ಲಿ ನೆಲೆನಿಂತರು. ಪರಶುರಾಮನು ನಿರ್ಮಿಸಿದನೆಂದು ಹೇಳಲಾದ ಸಪ್ತ ಕೊಂಕಣಗಳಲ್ಲಿ ಒಂದಾದ ಗೋವಾ ಪ್ರದೇಶಕ್ಕೆ ಇವರನ್ನು ಕರೆತರಲಾಯಿತು. ಮೂಲತಃ ಇವರು ಶಿವೋಪಾಸಕರು. ಆದರೆ ಮಧ್ಯಕಾಲದಲ್ಲಿ, ಮಧ್ವಾಚಾರ್ಯರಿಂದಾಗಿ ಅನೇಕರು ವೈಷ್ಣವರಾದರು. ಕುಪ್ರಸಿದ್ಧ ಪೋರ್ತುಗೀಸ್ ದಬ್ಬಾಳಿಕೆಯಲ್ಲಿ, ಇವರು ಗೋವೆಯನ್ನು ತ್ಯಜಿಸಿ, ಸುತ್ತಲಿನ ಅನ್ಯ ಸೀಮೆಗಳಿಗೆ ಹೊರಟರಾದರೂ ಹೆಚ್ಚಾಗಿ ನೆಲೆನಿಂತುದು ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿಯೇ. ಬೇರೊಂದು ಲೇಖದಲ್ಲಿ, ಪೈ ಅವರು ಸಾರಸ್ವತ ಗೌಡಸಾರಸ್ವತ ಎಂಬ ಪ್ರಭೇದಗಳನ್ನೂ ಗುರುತಿಸಿದ್ದಾರೆ. ಕೊಂಕಣದ ಈ ಬ್ರಾಹ್ಮಣರ ವಿಚಾರದಲ್ಲಿ ಪೈಯವರಷ್ಟು ಐತಿಹಾಸಿಕ ಶೋಧ ಮಾಡಿದವರು ಬೇರೆ ಯಾರೂ ಇಲ್ಲ; ಹಾಗೂ ಅವರು ಕಂಡುಹಿಡಿದ ಅಂಶಗಳೇ ಇಂದಿಗೂ ಪ್ರಾಮಾಣ್ಯವಾಗಿವೆ.

ಪೈಯವರ ನಿವಾಸಸ್ಥಳವಾದ ಮಂಜೇಶ್ವರದಲ್ಲಿ ಅನಂತೇಶ್ವರ ದೇವಾಲಯವಿದೆಯಷ್ಟೆ. ಅದು ಮೂಲತಃ ಸಾರಸ್ವತರ ದೇವಸ್ಥಾನವು. ಈ ದೇವಸ್ಥಾನದ ಪ್ರಾಚೀನತೆ, ಅಲ್ಲಿ ನಡೆಯುವ ಉತ್ಸವಾದಿಗಳ ಹಿನ್ನೆಲೆ, ಪರಂಪರೆಗಳನ್ನು ವಿಶದವಾಗಿ ಕೊಟ್ಟಿದ್ದಾರೆ (All India Saraswat Mag. 1920). ಸಾರಸ್ವತರಿಗೆ ಸಂಬಂಧಿಸಿದ ಶಾಸನಗಳನ್ನು ಪರಿಶೀಲಿಸುತ್ತಿದ್ದಾಗ, ಮೂವರು ಸಾರಸ್ವತ ಬ್ರಾಹ್ಮಣರು ಉಡುಪಿಯ ಶ್ರೀಕೃಷ್ಣನಿಗೆ ದತ್ತಿಯನ್ನು ಬಿಟ್ಟಿದ್ದರ ಉಲ್ಲೇಖವು ಮತ್ತೊಂದು ಲೇಖದಲ್ಲಿ ಬಂದದ್ದಿದೆ (ಪ್ರಭಾತ, ೧೯೪೫).

ಈ ದಿಸೆಯಲ್ಲಿ ಇನ್ನೊಂದು ಮಹತ್ವದ ಶೋಧವು ಕೊಂಕಣಿ ಭಾಷೆಯ ಮೂಲವನ್ನು ಕುರಿತದ್ದಿದೆ. ಅದು ಮರಾಠೀಜನ್ಯವಲ್ಲ ಎಂಬುದನ್ನು ಪೈಯವರು ಬಲವತ್ತರವಾದ ಪ್ರಮಾಣಗಳಿಂದ ಸಿದ್ಧಪಡಿಸಿದ್ದಾರೆ. ಗೋವೆಗೆ ಕೊಂಕಣಿ ಭಾಷೆಯನ್ನು ತಂದವರು

ಈ ಸಾರಸ್ವತರು ತಾನೇ. ಬಿಹಾರದಿಂದ ಬಂದವರಾದ ಅವರು ಮಾಗಧೀ ಪ್ರಾಕೃತವನ್ನು ಅನುಸರಿಸಿದರು. ಹೀಗೆ ಕೊಂಕಣಿಯು ಮಾಗಧೀ ಪ್ರಾಕೃತದಿಂದ ಹುಟ್ಟಿದ ಭಾಷೆ. ಮರಾಠಿಯೂ ಪ್ರಾಕೃತಜನ್ಯವೇ. ಆದರೆ ಮಾಗಧ ಪ್ರಾಕೃತಕ್ಕಿಂತ ಈಚಿನ ಕಾಲದ್ದಾದ 'ಮಹಾರಾಷ್ಟ್ರ' (ಮಾಳವ–ಮಧ್ಯಪ್ರದೇಶ) ಪ್ರಾಕೃತದಿಂದ ಹುಟ್ಟಿದುದು. ಈ ಕಾರಣದಿಂದಾಗಿ ಕೊಂಕಣಿಯು ಮರಾಠಿಯಿಂದ ಹುಟ್ಟಿದ ಉಪಭಾಷೆಯಂತೂ ಅಲ್ಲವೆ ಅಲ್ಲ; ಮೇಲಾಗಿ ಅದು ಮರಾಠಿಗಿಂತಲೂ ಪ್ರಾಚೀನವಾದ ಭಾಷೆ ಎಂದು ಪೈ ಅವರು ಪ್ರತಿಪಾದಿಸಿದ್ದಾರೆ.

## ತುಳುನಾಡು

ತುಳುನಾಡು—ಎಂದರೆ ಇಂದಿನ ದಕ್ಷಿಣ ಕನ್ನಡ ಜಿಲ್ಲೆಯು ಕುರಿತಾದ ಗೋವಿಂದ ಪೈ ಅವರ ಪ್ರಥಮ ಲೇಖದ (ಪಂಚ ಕಜ್ಜಾಯ, ೧೯೨೭) ಹೆಸರು 'ಇತಿಹಾಸದ ಇರುಳಲ್ಲಿ ತುಳುನಾಡು' ಎಂದು ಇದೆ. ನಿಜವೇ. ಆ ಮುಂಚೆ, ತುಳುನಾಡು ಎಂಬುದು ಎಲ್ಲಿ ಹೇಗೆ ಇದ್ದಿತು ಎಂಬ ಕಲ್ಪನೆ ತುಳುನಾಡವರಿಗೇ ಇರಲಿಲ್ಲ. ಕಾಲಗರ್ಭದ ಕತ್ತಲೆಯಿಂದ ಹೊರತೆಗೆದು ಅದನ್ನು ಬೆಳಕಿಗೆ ತಂದವರಲ್ಲಿ ಪೈಯವರು ಪ್ರಮುಖರು. ಅವರ ಒಟ್ಟಿನ ಸಂಶೋಧನ ಕಾರ್ಯದಲ್ಲಿ ತುಳುನಾಡನ್ನು ಕುರಿತ ಪರಿಶೋಧನೆಯು ಪ್ರಾಮುಖ್ಯವಾಗಿದೆ. ಈ ವಿಷಯಕವಾದ ಸಂಶೋಧನೆಯು ಮುಂದುವರಿಯಿತು. ಆಮೇಲೆ ೧೯೪೭ರಲ್ಲಿ ಅವರು 'ತುಳುನಾಡು—ಪೂರ್ವಸ್ಮೃತಿ' ಎಂಬ ಸುದೀರ್ಘ ಲೇಖವನ್ನು ಬರೆದರು. ಅದರಲ್ಲಿ ೨೦ ವರ್ಷಗಳ ವರೆಗಿನ ಅವರ ತುಳುನಾಡ ವಿಷಯದ ಸಂಶೋಧನೆಯೆಲ್ಲವೂ ಸಾರವತ್ತಾಗಿ ಬಂದಿದೆ. ಈ ಲೇಖವೂ ಒಂದು ಸಾಹಿತ್ಯ ಸಮ್ಮೇಳನ ಸಂಚಿಕೆಯಲ್ಲಿಯೇ (ತೆಂಕನಾಡು–ಕಾಸರಗೋಡು ಸಾಹಿತ್ಯ ಸಮ್ಮೇಳನ ಸಂಚಿಕೆ) ಪ್ರಕಟವಾದುದು ಒಂದು ಯೋಗಾಯೋಗ.

ಈ ಮಹತ್ವದ ಲೇಖನದಲ್ಲಿ, ತುಳುನಾಡಿನ ಬಗ್ಗೆ ಸಿದ್ಧಾಂತಿಸಲಾದ ಮುಖ್ಯಾಂಶಗಳು ಇಂತಿವೆ:

(i) **ಹೆಸರು:** ತುಳುನಾಡು ಎಂಬ ಪದದ ಮೂಲಾರ್ಥದ ಬಗ್ಗೆ ಪೈ ಅವರು ತುಳು–ತುಳ್ವ, ಎಂದರೆ ನೀರಲ್ಲಿ ಹುಟ್ಟುಹಾಕು, ಮುಳುಗು ಎಂಬ ಮೂಲ ದ್ರಾವಿಡ ಪದದಿಂದ ಹುಟ್ಟಿರಬೇಕು ಎನ್ನುತ್ತಾರೆ. ನೀರಲ್ಲಿ ನೆರೆಯಾಡುವ ಬೆಸ್ತರು, ಮೀನುಗಾರರಿಂದಲೇ ತುಳುನಾಡಿಗೆ ಆ ಹೆಸರು ಬಂದಿರುವುದು ಯಥಾ ಯೋಗ್ಯವೇ ಆಗಿದೆ. ಕರ್ನಾಟಕ-ಕನ್ನಡ ಎಂಬ ಶಬ್ದಗಳ ಬಗ್ಗೆ ಹೇಗೋ ಹಾಗೆಯೇ, ತುಳುನಾಡಿನ ಮೂಲರೂಪದ ಬಗ್ಗೆಯೂ ಬೇರೆ ಅಭಿಪ್ರಾಯಗಳಿವೆಯಾದರೂ, ಪೈ ಅವರ ಈ ವ್ಯುತ್ಪತ್ತಿ ನಿರೂಪಣೆ ಬಹುಧಾ ಮಾನ್ಯವಾಗಿದೆ.

(ii) **ಪ್ರಾಚೀನತೆ:** ತುಳುನಾಡು ಎಂಬ ಪದವು ಮೊದಲು ದೊರೆಯುವುದು ಬಲ್ಮುರಿಯ ಶಾಸನದಲ್ಲಿ. ಅದರ ಕಾಲವು ಈಚಿನದು ಎಂದರೆ ಕ್ರಿ.ಶ. ೧೦೧೨. ಆದರೆ ಈ ನಾಡು ಅದಕ್ಕಿಂತಲೂ ಪ್ರಾಚೀನವಾದುದು. ಈ ನಾಡಿಗೆ ಸಂಬಂಧಿಸಿದ ಅತಿ ಪ್ರಾಚೀನ ಉಲ್ಲೇಖವೆಂದರೆ ಹರಿವಂಶ ಪುರಾಣದಲ್ಲಿಯ (ಕ್ರಿ. ಪೂ. ೩ನೇ ಶತಮಾನ) ಮುದ್ಗರ ಅಥವಾ ಮೊಗೇರರದು. ಇಂದಿನ ತುಳುನಾಡ ನಿವಾಸಿಗಳಲ್ಲಿ ಇಂದಿಗೂ ಈ ಮೊಗೇರರು ಮುಖ್ಯರಾಗಿಯೇ ಇದ್ದಾರೆ.

ಹಾಗಿದ್ದರೆ ತುಳುನಾಡಿನ ಪೂರ್ವದ ಹೆಸರು ಏನಿದ್ದಿತು? ಕ್ರಿ.ಶ. ಪೂರ್ವಕಾಲದ ಅಶೋಕನ ಒಂದು ಕಿರುಶಾಸನದಲ್ಲಿ "ಸತಿಯ ಪುತ್ರ" ಎಂಬ ಸೀಮೆಯು ಪ್ರಸ್ತಾಪವಿದೆ (ಕ್ರಿ.ಶ.ಪೂ. ೩). ಅನಂತರ ಮಾರ್ಕಂಡೇಯ ಪುರಾಣ, ವರಾಹಮಿಹಿರನ ಬೃಹತ್ ಸಂಹಿತೆ ಮುಂತಾದುವುಗಳಲ್ಲಿ ಶಾಂತಿಕವೆಂಬ ಪ್ರದೇಶದ ಉಲ್ಲೇಖ ಬರುತ್ತದೆ. ಅವೆರಡೂ ತುಳುನಾಡಿಗೆ ಸಂಬಂಧಿಸಿವವುಗಳು. ಪರಶುರಾಮ ನಿರ್ಮಿತ ಸಪ್ತಕೊಂಕಣಗಳಲ್ಲಿ ಈ ಪ್ರದೇಶವೂ ಸಮಾವೇಶವಾಗಿದ್ದು ಆಗ ಅದರ ಹೆಸರು ಆಲುವ ಎಂದಿದ್ದಿತು. ಇದೂ ತುಳುನಾಡಿಗೆ ಸಮಾನಾರ್ಥಕ ಪದವೇ ಎಂದು ಪೈಯವರ ಮತ.

(iii) **ರಾಜರು:** ಈ ಆಲುವ ಪ್ರದೇಶವನ್ನೇ ಆಳುಪರೆಂಬ ರಾಜಮನೆತನದವರು ಕ್ರಿ.ಶ. ೭ರಿಂದ ೧೫ನೇ ಶತಮಾನದ ವರೆಗೆ ಆಳಿದರು. ತುಳುನಾಡಿನ ಪ್ರಾಚೀನ ಚರಿತ್ರೆಯಲ್ಲಿ ಪ್ರಮುಖ ನಾಗಿ ಬರುವ ಭೂತಾಳ ಪಾಂಡ್ಯನು ಈ ಆಳುಪ ಮನೆತನ ದವನೇ. ತುಳುನಾಡವರ ಮನೆಮಾತಾಗಿದ್ದ ಈ ವ್ಯಕ್ತಿಯು ಒಬ್ಬ ಕಾಲ್ಪನಿಕ ಪವಾಡಪುರುಷನಂತಿದ್ದ. ಆದರೆ ಅವನು ಐತಿಹಾಸಿಕ ವ್ಯಕ್ತಿಯೇ ಆಗಿ, ಕ್ರಿಸ್ತಶಕಾರಂಭದಲ್ಲಿ ಇದ್ದವ ಎಂಬುದನ್ನು ಪೈಯವರು ತೋರಿಸಿಕೊಟ್ಟಿದ್ದಾರೆ. ಅದರಂತೆ ತುಳುನಾಡಿನಲ್ಲಿ ಮಾತ್ರ ರಾಜ್ಯವಾಳಿದ ಅಜಿಲರಸರ ಬಗ್ಗೆಯೂ ವಿಶೇಷ ಪರಿಶೋಧನೆ ಮಾಡಿ, ಅದುವರೆಗೆ ಅಪ್ರಸಿದ್ಧರಾಗಿದ್ದ ಅಜಿಲರಸರಿಗೆ ಇತಿಹಾಸದ ಪುಟಗಳಲ್ಲಿ ಸ್ಥಾನವನ್ನು ದೊರಕಿಸಿ ಕೊಟ್ಟಿದ್ದಾರೆ.

(iv) **ಧಾರ್ಮಿಕ ಚರಿತ್ರೆ:** ತುಳುನಾಡಿನ ಧಾರ್ಮಿಕ ಚರಿತ್ರೆ ಯನ್ನೂ ತುಸು ಮಟ್ಟಿಗೆ ಚಿತ್ರಿಸಿದ್ದಾರೆ. ಈ ದಿಸೆಯಲ್ಲಿ ಅವರು ಕಂಡುಹಿಡಿದ ಒಂದು ಮಹತ್ವದ ಅಂಶವೆಂದರೆ ತುಳುನಾಡಿ ನಲ್ಲಿರುವ ನಾಥಪಂಥದ ಅವಶೇಷಗಳು. ನಾಥಪಂಥವು ಬೌದ್ಧ-ಶೈವ ಮತಗಳ ಸಮನ್ವಯವುಳ್ಳದ್ದು. ಈ ಪಂಥವು ಕದಿರೆಯ ಸುತ್ತುಮುತ್ತು ನಿಶ್ಚಿತವಾಗಿ ಇತ್ತೆಂಬುದನ್ನು ಪ್ರಥಮಬಾರಿಗೆ ಪೈ ಕಂಡುಹಿಡಿದಿದ್ದಾರೆ. ಕ್ರಿ.ಶ. ಆರಂಭದಲ್ಲಿ ಕದಿರೆಯಲ್ಲಿ ಮಂಜು ಘೋಷ(ನಾಥ) ಎಂಬ ಬೋಧಿಸತ್ವನ ವಿಹಾರವಿದ್ದಿತು. ಭಾರತದ ಇತರ ಕಡೆಗಳಂತೆ ಬೌದ್ಧ ಧರ್ಮವು ಇಲ್ಲಿಯೂ ಖಿಲವಾಯಿತು. ಮುಂದೆ ಮತ್ಸ್ಯೇಂದ್ರನೆಂಬ ನಾಥಪಂಥ ಪ್ರವ ರ್ತಕನು (ಕ್ರಿ. ಶ. ೯ನೇ ಶತ) ದೂರದ ಬಂಗಾಲದಿಂದ ನಮ್ಮಲ್ಲಿಗೆ ಬಂದು ಕದಿರೆಯಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿ, ಅದಕ್ಕೆ ಮುನ್ನಿನ ಮಂಜುನಾಥ ಎಂಬ ಹೆಸರನ್ನೇ ಇಟ್ಟಿರಬೇಕು. ಶಿವನಿಗೆ ಮಂಜು ನಾಥ ಎಂಬ ಹೆಸರು ಯಾವ (ಶೈವ) ಪುರಾಣದಲ್ಲಿಯೂ ಇಲ್ಲ; ಕದಿರೆಯ ಶಿವಲಿಂಗಕ್ಕೆ ಮಾತ್ರ ಈ ಹೆಸರೇಕೆ ಎಂಬ ಜಿಜ್ಞಾಸೆ ಮೂಡಿದಾಗ ಮೇಲೆ ಹೇಳಿದಂತೆ ನಾಥಪಂಥದ ಪ್ರಭಾವವೇ

ಕಾರಣವೆಂದು ಪೈಯವರು ಹೇಳಿದ್ದಾರೆ. ಧರ್ಮಸ್ಥಳದಲ್ಲಿಯೂ ಶಿವಲಿಂಗವಿದೆಯಷ್ಟೆ. ಅಲ್ಲಿಯ ಶಿವಲಿಂಗವು ಕದಿರೆಯ ಶಕಲವೇ ಆದ್ದರಿಂದ, ಅದಕ್ಕೂ ಮಂಜುನಾಥ ಎಂಬ ಹೆಸರೇ ಪ್ರಾಪ್ತವಾಯಿತು (ಸಮರ್ಪಣೆ, ೧೯೫೦).

(v) **ತುಳುನಾಡಿಗೆ ಗ್ರೀಕ್ ಸಂಬಂಧ:** ಕ್ರಿ.ಶ. ೨ನೆಯ ಶತಮಾನದಲ್ಲಿ ರಚಿತವಾದ ಗ್ರೀಕ್ ಪ್ರಹಸನವೊಂದಿದೆ. ಅದರ ಕಥಾಭೂಮಿಯು ತುಳುನಾಡಿನ ಉದ್ಯಾವರವೆಂದೂ, ಅದರಲ್ಲಿ ಬರುವ ಕೆಲವು ಶಬ್ದಗಳು ಕನ್ನಡದವೆಂದೂ ಪೈಯವರು ನಿಷ್ಕರ್ಷಿಸಿದ್ದಾರೆ (ಪ್ರ.ಕ. ೧೯೨೯). ಆ ಪ್ರಹಸನದ ಕಥೆ ಹೀಗಿದೆ: ಓರ್ವ ಗ್ರೀಕ್ ಕನ್ನಿಕೆಯು, ಹಿಂದೂಮಹಾಸಾಗರದಲ್ಲಾದ ನೌಕಾಘಾತದ ಮೂಲಕ ಸಮುದ್ರ ತೀರದ ಒಂದು ಊರಿಗೆ ಬರುತ್ತಾಳೆ. ಯಾವುದು ಆ ಊರು? ಆ ಪ್ರಹಸನದಲ್ಲಿ ಬರುವ ಸೋಮೇಶ್ವರ ದೇವಾಲಯ ಹಾಗೂ ಆಳುಪ ನಾಯಕರ ಉಲ್ಲೇಖಗಳಿಂದಾಗಿ ಆ ಕಡಲ ತೀರವು ಉದ್ಯಾವರವೇ ಎಂದು ಪ್ರಮಾಣಸಹಿತವಾಗಿ ಪೈಯವರು ಸಿದ್ಧಮಾಡಿದರು. ಆ ಮುಂದೆ ಗ್ರೀಕ್ ನಾವಿಕರು ಅವಳ ಪತ್ತೆಹಚ್ಚಿ, ಸ್ಥಳಿಕ (ಎಂದರೆ ಆಳುಪ) ರಾಜನ ಅನುಮತಿಯನ್ನು ಪಡೆದು ಅವಳನ್ನು ತಿರುಗಿ ಕರೆದೊಯ್ಯುವ ಕಾಲಕ್ಕೆ ಪಾನಗೋಷ್ಠಿ ನಡೆದು ಅಂಶವು ಪ್ರಹಸನದಲ್ಲಿ ಬಂದಿದೆ. ಆ ಸಮಯಕ್ಕೆ ಸ್ಥಳಿಕರು ಆಡಿದ 'ಏ ಕೂಸೇ', 'ಕರೆವನೊ', 'ಬೈತಿ', 'ಪೊರಟೆ', ಮುಂತಾದ ಕನ್ನಡ ಮಾತುಗಳು ಉಕ್ತವಾಗಿವೆ. ಗ್ರೀಕ್ ಭಾಷೆಗೆ ಒಗ್ಗುವಂತೆ ಅವು ಪರಿವರ್ತನ ಹೊಂದಿದ್ದರೂ ಆ ಶಬ್ದಗಳು ಅನ್ಯಭಾಷೆಯವಾಗಿದ್ದರಿಂದ, ಆ ಪ್ರಹಸನದ ಸಂಪಾದಕರಿಗೆ ಅವುಗಳ ಅರ್ಥವಾಗಿರಲಿಲ್ಲ. ಗ್ರೀಕ್ ಮತ್ತು ಕನ್ನಡ ಇವೆರಡನ್ನೂ ಬಲ್ಲ ಗೋವಿಂದ ಪೈಯವರಿಂದ ಆ ಕೆಲಸ ನೆರವೇರಿತು. ಅದರಿಂದ ತುಳುನಾಡವರ ಕಡಲ ವ್ಯವಹಾರವು ಕ್ರಿಸ್ತಯುಗ ಪೂರ್ವದಲ್ಲಿಯೇ ಸಾಕಷ್ಟು ವ್ಯಾಪಕವಾಗಿತ್ತೆಂದೂ, ದೂರದ ಗ್ರೀಕರೊಡನೆ ಸಂಪರ್ಕವೂ ಇದ್ದಿತಲ್ಲದೆ

ಇಲ್ಲಿಯವರ ನಾಗರಿಕ ಜೀವನವು ಉಚ್ಚಮಟ್ಟದ್ದಾಗಿತ್ತೆಂದೂ ಊಹಿಸಬಹುದಾಗಿದೆ.[2]

(vi) **ಮಂಗಳೂರಿನ ಪ್ರಾಚೀನತೆ:** ಉದ್ಯಾವರವಲ್ಲದೆ ಇನ್ನು ಕೆಲವು ಊರುಗಳ ಪ್ರಾಚೀನ ಕುರುಹುಗಳನ್ನು, ಶಾಸನ, ಪುರಾಣ ಗಳಿಂದ ಆಯ್ದು ಒಂದೆಡೆ ಕೊಟ್ಟಿದ್ದಾರೆ. ಇಂದಿನ ಮಂಗಳೂರು ೮ನೆಯ ಶತಮಾನದಲ್ಲಿ ಕೂಡ ಒಂದು ಮಹಾ ನಗರವೆಂದು ಪರಿಭಾವಿಸಲ್ಪಡುತ್ತಿದ್ದ ಅಂಶವು ಹೊರಪಟ್ಟಿದೆ. ಇಷ್ಟೇ ಅಲ್ಲದೆ, ಕ್ರಿಸ್ತ ಶಕಾರಂಭದಿಂದಲೂ, ಮಂಗಳೂರಿನ ಹಾಗೂ ಅದರ ನೆರೆಯ ನೇತ್ರಾವತೀ ನದಿಯ ಉಲ್ಲೇಖ, ವರ್ಣನೆಗಳು ದೊರೆ ಯುತ್ತವೆ. ಅದರಂತೆ ಮೂಲ್ಕಿಯ ಇತಿಹಾಸವನ್ನೂ ಸಂಕ್ಷೇಪ ವಾಗಿ ಒಂದೆಡೆ ಕೊಟ್ಟಿದ್ದಾರೆ (ಮೂಲ್ಕಿ ಗವರ್ನ್‌ಮೆಂಟ್ ಹೈ ಸ್ಕೂಲ್ ಪತ್ರಿಕೆ, ೧೯೫೯–೬೦).

(vii) **ತುಳುನಾಡಿನ ಶಾಸನಗಳು:** ಬೇರೆ ಬೇರೆ ಪ್ರಸಂಗ ಗಳಲ್ಲೇ ಆಗಲಿ, ಪೈಯವರು ತುಳುನಾಡಿನಲ್ಲಿರುವ ಅನೇಕ ಶಾಸನಗಳನ್ನು ಪರಿಶೀಲಿಸಿದ್ದರು. ಅವರು ಪರಿಶೀಲಿಸಿದ ಶಾಸನ ಗಳು ಹೆಚ್ಚಾಗಿ ದೊರೆವುದು ವೇಣೂರು, ಕಾರ್ಕಳ ಮತ್ತು ಕದಿರೆ ಗಳಲ್ಲಿ. ಗೊಮ್ಮಟ ಮಹಾಮೂರ್ತಿಗಳಿರುವ ವೇಣೂರು, ಕಾರ್ಕಳ ಈ ಊರುಗಳ ಶಾಸನಗಳನ್ನು ಅಭ್ಯಸಿಸಿ, ಆ ಮೂರ್ತಿ ಗಳ ಪ್ರತಿಷ್ಠಾಪನ ತೇದಿಗಳನ್ನು ಬೆಳಕಿಗೆ ತಂದಿದ್ದಾರೆ (ವೇಣೂರಿ ನದು: ೧–೩–೧೬೦೪. ಕಾರ್ಕಳದ್ದು : ೧೩–೨–೧೪೩೨).

(viii) **ಹಲವು ಪ್ರಸಿದ್ಧ ವ್ಯಕ್ತಿಗಳು:** ತುಳುನಾಡಿನಲ್ಲಿ ಜನಿ ಸಿದ ಶ್ರೀ ಮಧ್ವಾಚಾರ್ಯ, ರತ್ನಾಕರವರ್ಣಿ, ಪಾರ್ತಿಸುಬ್ಬ, ಮುದ್ದಣ,[3] ಇವರ ಚರಿತ್ರೆಗೆ ಸಂಬಂಧಿಸಿದ ಹಲವಾರು ಸಂದಿಗ್ಧ

---

[2]ಇಲ್ಲಿರುವ ಮಾತುಗಳು ಕನ್ನಡದವಲ್ಲ; ತುಳು ಭಾಷೆಯವು ಎಂಬ ಸೂಚನೆ ಈಚೆಗೆ ಮುಂಬಂದಿದೆ—ಶಿವಪ್ರಸಾದ ರೈ ಅವರಿಂದ.

[3]ಮಧ್ವಾಚಾರ್ಯರ ಕಾಲ ನಿರ್ಣಯಕ್ಕಾಗಿ ಕ.ಸಾ.ಪ. ೧೯೪೫, ರತ್ನಾಕರ ವರ್ಣಿಯದಕ್ಕಾಗಿ ಕ.ಸಾ.ಪ. ೧೯೪೩ ನೋಡುವುದು. ಪಾರ್ತಿಸುಬ್ಬ, ಮುದ್ದಣರ ಮೇಲಿನ ಅವರ ಲೇಖಗಳು ಹಲವಾರು ಕಡೆಗಳಲ್ಲಿ ಮರು ಮುದ್ರಣಗೊಂಡಿವೆ.

ಅಂಶಗಳನ್ನು ಸಮಗೊಳಿಸಿ, ಅವರೆಲ್ಲರ ಕಾಲದ ನಿರ್ಣಯ ಮಾಡಿದ್ದಾರೆ. ವಿಶ್ವಸಾಹಿತ್ಯದ ವೇದಿಕೆಯಲ್ಲಿ, ರತ್ನಾಕರವರ್ಣಿ ಮತ್ತು ಮಧ್ವರು ತುಳುನಾಡಿನ ಪ್ರತಿನಿಧಿಗಳು ಎಂಬ ಮಾತನ್ನು ಹೇಳಿದ್ದಾರೆ. ಇವರಿಗಿಂತ ಈಚಿನವರಾದ ಪಂಜೆಯವರು, ಎಂ. ಎನ್. ಕಾಮತ್, ಎಸ್. ಎಸ್. ಕಿಲ್ಲೆ ಇವರ ಕುರಿತಾದ ವ್ಯಕ್ತಿಚಿತ್ರಗಳಲ್ಲಿ ಕನ್ನಡಕ್ಕೆ ಈ ಮಹನೀಯರುಗಳು ಸಲ್ಲಿಸಿದ ಸೇವೆಯ ವಿವರಣೆ ಇದೆ.

ತುಳುನಾಡಿನಲ್ಲಿ ಪ್ರಧಾನವಾಗಿ ಇರುವ ಅಳಿಯಕಟ್ಟಿನ ಪರಂಪರೆ. ಅಲ್ಲಿಯ ಜಾನಪದ ಕತೆಗಳು, ಇವುಗಳ ಬಗ್ಗೆಯೂ ಪೈಯವರು ವಿವೇಚನೆ ನಡೆಸಿದ್ದಾರೆ (ಜಯ ಕರ್ನಾಟಕ. ೧೯೫೩). ತುಳುನಾಡಿನ ಕಾಸರಗೋಡು ಕೈಬಿಟ್ಟಿತೆಂಬ ಪ್ರಚಲಿತ ವಿಷಯದ ವಿವೇಚನೆಯೂ ಲೇಖರೂಪದಲ್ಲಿ ವ್ಯಕ್ತವಾಗಿದೆ (ಲೋಕವಾಣಿ, ೧೯೫೬).

ಇದಿಷ್ಟೇ ವಿವರಣೆಯಿಂದ, ತುಳುನಾಡಿನ ಕುರಿತಾದ ಸಂಶೋಧನೆಯಲ್ಲಿ ಪೈಯವರ ಪಾತ್ರ ಅತ್ಯಂತ ಕಿರಿದು ಎಂಬ ಕಲ್ಪನೆ ಬಾರದಿರದು. ತಮ್ಮ ನಾಡಿನ ವಿವಿಧಾಂಗಗಳನ್ನು ಇರುಳ ಕತ್ತಲೆಯಿಂದ ಹೊರತೆಗೆದ ಪೈಯವರಿಗೆ ತುಳುನಾಡವರು ಸದೈವ ಋಣಿಯಾಗಿದ್ದಾರೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಹೀಗೆ ತುಳುನಾಡ ದೇವಿಯನ್ನು ಮೂರ್ತೀಕರಿಸಿ, ಅವಳ ಸಕೃದ್ದರ್ಶನ ಪಡೆದಿದ್ದ ಪೈಯವರು, 'ತೌಳವ ಮಾತೆ'ಯನ್ನು ಭಾವಪೂರ್ಣವಾಗಿ ಸ್ತುತಿಸಿದ್ದಾರೆ:

ಜಯ ಜಯ ತೌಳವ ತಾಯೇ. ಮಣಿವೆ ತಂದೆ ತಾಯಂದಿರ ತಾಯೇ
ಭಾರ್ಗವನಂದು ಬಿಸುಟೆ ಕೊಡಲಿಯ ನೀ ಕಡಲೊಡೆವೆಡೆಯಿಂ ಮೂಡಿ.
ಭಾರತಮಾತೆ ತೊಡೆಯೊಳೊಡಗೂಡಿಸೆ. ಸಹ್ಯ ವೀಣೆಯಿಂ ತೀಡಿ-
ದೆಸೆದೆಸೆ ರವಿಶಶಿ ಕಿರಣದ ಮಳೆಮಂಜಿನ ಮಿಸುಸೇಸೆಯ ಸೂಸೆ
ನವನವ ಋತುಗಾನವನವತರಿಸುವೆ, ಗಗನವನಧಿಯೋಲೈಸೆ.

ಸಾತಿಯ ಪುತ್ರನ ತವರ್ಮನೆ, ಸಾತರ ತೆಂಕಣ ನೆಲೆಮನೆಯಲೂಪರಾ
ಕೆಳಮನೆ ಪಾಂಡ್ಯರ ಮೋಲ್ಮನೆ. ನೆರೆಯರಮನೆ ಕನ್ನಾಡಿನ ಭೂಪರಾ.

ಭೈರವ ಬಂಗರ ಚೌಟರಜಿಲ ಸಾವಂತರ ಮನೆಮನೆಯೆಂಬೇ
ತುಳುವರ ತಾಯ್ಮನೆಯುಳಿದರ ತಾಯ್ಮನೆ–ನೀನೆಮ್ಮಯ
ಮನೆಯೆಂಬೇ

ದೇಗುಲಗಳೊ ಧರ್ಮದ ಬಾಗಿಲಗಳೊ? ಪುಣ್ಯಘಟಂ ತಟನೀತಟಂ
ಬಸದಿಗಳೋ ಕನಸೇ ಕಲ್ಲಾದುವೊ? ನೆಲಬಿರಿದೆದ್ದರೆ ಗೊಮ್ಮಟಂ?
ನಿನ್ನ ಪುಲಕವೇ ಪಸರಿದಂತೆ ಪಸರಿಸಿದೀ ಸಸ್ಯದ ಚೆಲುವೆಂ!
ಜೀವನಸಾವುಪನಾಡುವ ಪಾಡುವ ಖಗಮೃಗ ಪತಂಗದೊಲವೆಂ!

ಹಿಂದು ಜೈನ ಮುಸ್ಲೀಮ ಕ್ರೈಸ್ತರಾವೊಂದೇ ಬಾಂಧವರೆಮ್ಮಾ
ತಂದೆ ದೇವರೊಬ್ಬನೆ, ನೀನೊಬ್ಬಳೆ ನಮ್ಮೆಲ್ಲರ ತಾಯಮ್ಮಾ.

(ಗಿಳಿವಿಂಡು, ಪು. ೪೬)

## ಕರ್ನಾಟಕ

ಕರ್ನಾಟಕದ ಇತರ ಭಾಗಗಳಿಗೆ ಸಂಬಂಧಿಸಿದ ಪೈಯವರ ಸಂಶೋಧನಾ ಕಾರ್ಯವು ಹೆಚ್ಚಾಗಿ ಪ್ರಾಚೀನ ಕರ್ನಾಟಕಕ್ಕೆ ಸಂಬಂಧಿಸಿದ್ದಾಗಿದೆ.

### ಕರ್ನಾಟಕಕ್ಕೆ ಜೈನಧರ್ಮದ ಆಗಮನ

ಕರ್ನಾಟಕದಲ್ಲಿ ಪ್ರಥಮತಃ ಕಾಲಿರಿಸಿದ ಜೈನರೆಂದರೆ ಭದ್ರಬಾಹುಮುನಿ ಮತ್ತು ಚಂದ್ರಗುಪ್ತರು. ಉತ್ತರ ದೇಶದಲ್ಲಿ ಬರಗಾಲ ಬೀಳುವುದೆಂದು ದಿವ್ಯದೃಷ್ಟಿಯಿಂದ ಅರಿತವನಾಗಿ, ಭದ್ರಬಾಹುಮುನಿಯು ಚಂದ್ರಗುಪ್ತ ಮತ್ತು ಇತರ ಶಿಷ್ಯರೊಡನೆ ದಕ್ಷಿಣದತ್ತ ಸಾಗಿದನೆಂಬುದು ಜೈನರಲ್ಲಿಯ ಸುಪ್ರಸಿದ್ಧ ಐತಿಹ್ಯವಾಗಿದೆ. ಜೈನ ಇತಿಹಾಸದಲ್ಲಿ ಇದೊಂದು ಮಹತ್ವದ ಘಟನೆ. ಏಕೆಂದರೆ ಈ ಕಾರಣದಿಂದಲೆ ಜೈನರಲ್ಲಿ ಶ್ವೇತಾಂಬರ, ದಿಗಂಬರ ಎಂಬ ಟಿಸಿಲುಗಳಾದುವು. ಭದ್ರಬಾಹುವಿನೊಡನೆ ಹೊರಟು ಬಂದ ಮುನಿಗಣದವರೇ ದಿಗಂಬರರು.

ಹೀಗೆ ಜೊತೆಗೂಡಿ ಬಂದ ಚಂದ್ರಗುಪ್ತನು ಮೌರ್ಯದೊರೆ

ಯೆಂದೇ ಸಾಮಾನ್ಯವಾಗಿ ತಿಳಿಯಲಾಗಿದ್ದಿತು. ಆದರೆ ಪೈಯವರ ಚಿಕಿತ್ಸಕ ಬುದ್ಧಿಗೆ ಅದು ಸರಿಯೆಂದು ತೋರಲಿಲ್ಲ. ಅದಕ್ಕಾಗಿ ಜೈನ ಪುರಾಣಗಳನ್ನೆಲ್ಲ ತಡಕಾಡಿ, ಆ ಚಂದ್ರಗುಪ್ತನು ಮೌರ್ಯ ದೊರೆಯಲ್ಲ, ಮಧ್ಯಭಾರತದ ಉಜ್ಜಯಿನಿಯಲ್ಲಿ ರಾಜ್ಯಭಾರ ಮಾಡುತ್ತಿದ್ದ ಸಂಪ್ರತಿ ಚಂದ್ರಗುಪ್ತ ಎಂಬುದಾಗಿ ನಿರ್ಣಯಿಸಿ ದರು (ಕ.ಸಾ.ಪ. ೧೯೪೧). ಇದರಿಂದ ಈ ಮಹಾಯಾತ್ರೆಯ ತೇದಿಯು ಕ್ರಿ.ಶ.ಪೂ. ೩೦೦ ಎಂದಿದ್ದುದು ಕ್ರಿ.ಶ.ಪೂ. ೨೫೦ ಎಂಬುದಾಗಿ ನಿರ್ಧರಿಸಲ್ಪಟ್ಟಿತು. ಈ ಹೊಸ ಶೋಧವು ಕರ್ನಾಟಕ ಹಾಗೂ ಭಾರತ—ಇವೆರಡರ ದೃಷ್ಟಿಯಿಂದಲೂ ಮಹತ್ವದ್ದೆನಿಸಿದೆ.

## ಪ್ಟೊಲೆಮಿಯು ಪ್ರಾಚೀನ ಕರ್ನಾಟಕದ ಭೂಗೋಲ

ಗ್ರೀಸದ ಪ್ಟೊಲೆಮಿಯು ಒಬ್ಬ ಪ್ರಾಚೀನ ಭೂಗೋಲಕಾರನು (೨ನೇ ಶತಮಾನ). ಭಾರತದ ಅನೇಕ ಸ್ಥಳಗಳ ಉಲ್ಲೇಖ, ವರ್ಣನೆಗಳನ್ನು ಅವನು ಬೇರೆಯವರಿಂದ ಕೇಳಿ ತಿಳಿದೇ ಆಗಲಿ ಬರೆದಿಟ್ಟಿದ್ದಾನೆ. ಪೈಯವರು ಅವನ ಪುಸ್ತಕದಲ್ಲಿ ಬಂದಿರುವ ಗ್ರೀಕ ಭಾಷೆಯಲ್ಲಿ ಗುರುತು ಹತ್ತದಂತೆ ಬದಲಾದ ಹೆಸರುಗಳುಳ್ಳ ಕರ್ನಾಟಕದ ಊರುಗಳಾವುವೆಂಬುದನ್ನು ಪರಿಶೀಲಿಸಿದ್ದಾರೆ. ಬೇರೆಯವರು ಅರ್ಥವಿಸಿದ್ದರಲ್ಲಾದ ತಪ್ಪುಗಳನ್ನು ಸರಿಪಡಿಸಿದ್ದಾರೆ. ಇಂದಿನ ಉತ್ತರ ಕನ್ನಡ ಜಿಲ್ಲೆಗೆ ಸಮಾನವಾದ ಪೈಹಯ ಪ್ರದೇಶ, ಉತ್ತರ ಕರ್ನಾಟಕದಲ್ಲಿರುವ ಭೀಮಾನದಿ, ಅದರ ಕೆಳಪ್ರದೇಶದಲ್ಲಿರುವ ಹತ್ತು ಊರುಗಳು—ವಿಶೇಷತಃ ಬನವಾಸಿ, ಹಿಪ್ಪೊಕೂರ (ವಿಜಾಪುರ ಜಿಲ್ಲೆಯ ಇಂದಿನ ಹಿಪ್ಪರಗಿ) ಇವುಗಳ ವಿವರಗಳು ಪೈಯವರ ತತ್ಸಂಬಂಧೀ ಲೇಖನಗಳಲ್ಲಿ ಉಕ್ತವಾಗಿವೆ. (ಪ್ರಬುದ್ಧ ಕರ್ನಾಟಕ, ೧೯೪೩). ಅವುಗಳಲ್ಲಿ Petrigala ಪಟ್ಟದಕಲ್ಲು ಅಲ್ಲ. ಪತ್ತರಕಿಹಾಳ ಎಂಬುದು. Hippokoura ಹೂವಿನ ಹಿಪ್ಪರಗಿ—ಇದು ಪೈ ನಿಲುವು.

## ಕೆಲವು ಪ್ರಾಚೀನ ರಾಜ ಮನೆತನಗಳು

ಕರ್ನಾಟಕದ ಮಧ್ಯಕಾಲೀನ ಇತಿಹಾಸದಲ್ಲಿಯ ಚಳುಕ್ಯ, ರಾಷ್ಟ್ರಕೂಟ, ವಿಜಯನಗರ ಸಾಮ್ರಾಜ್ಯಗಳ ಬಗ್ಗೆ ಇತರ ಸಂಶೋಧಕರ ಪರಿಶ್ರಮದ ಫಲವಾಗಿ ಸಾಕಷ್ಟು ವಿಷಯ ತಿಳಿದುಬಂದಿದೆ. ಲಭ್ಯವಿರುವ ನೂರಾರು ಶಾಸನಗಳ ಸಹಾಯದಿಂದ, ಆ ರಾಜ ಮನೆತನಗಳ ಸಮಗ್ರ ಚರಿತ್ರೆಯು ರೂಪುಗೊಂಡಿದೆ. ಆದರೆ ಕರ್ನಾಟಕದ ಪ್ರಾಚೀನ ರಾಜಮನೆತನಗಳ ಬಗ್ಗೆ ಮೂಲಭೂತ ಸಂಶೋಧನೆ ಆಗಿರಲಿಲ್ಲ. ಪೈಯವರು ಈ ಮಹತ್ತರವಾದ ಕಾರ್ಯವನ್ನು ಕೈಕೊಂಡರು. ಕನ್ನಡೇತರ ಶಾಸನ, ಪುರಾಣ ಐತಿಹ್ಯ ಇವೆಲ್ಲವನ್ನೂ ಅರಸಿಕೊಂಡು ಹೋಗಿ ಸಾತವಾಹನ ಪುನ್ನಾಟ, ಗಂಗ ಮತ್ತು ಕದಂಬರ ಇತಿಹಾಸವನ್ನು ಅಧಿಕೃತವಾಗಿ ಬರೆದರು.

ಕರ್ನಾಟಕದ ಉತ್ತರಕ್ಕಿದ್ದ ಪೈಠಣದಲ್ಲಿ ರಾಜ್ಯವಾಳಿದ ಸಾತವಾಹನರು, ವಿದೇಶೀಯ ಶಕರನ್ನು ಸೋಲಿಸಿ, ಅವರ ಹೆಸರಿನಿಂದಲೆ ಯುಗಾರಂಭವನ್ನು ಮಾಡಿ ವೈಭವದಿಂದ ಬಾಳಿದವರು. ಅಖಿಲ ಭಾರತ ಮಹತ್ವವುಳ್ಳ ಈ ಶಕರ ಸೋಲಿನ ಕತೆ, ಪೈಯವರಿಂದ ವಿಸ್ತಾರವಾಗಿ ನಿರೂಪಿತವಾಗಿದೆ. (J. Orie. Studies, 1949). ಅಲ್ಲದೆ, ಉತ್ತರಕಾಲೀನ ಸಾತವಾಹನ ರಾಜರ ಕಾಲನಿರ್ಣಯವನ್ನು (ಕ್ರಿ.ಶ. ೬೦–೨೦೫) ಪೈಯವರು ಮಾಡಿ, ಇತರ ಕೆಲವು ಚಾರಿತ್ರಿಕ ವಿವರಗಳನ್ನೂ ಬೆಳಕಿಗೆ ತಂದಿದ್ದಾರೆ (ಸಂಭಾವನೆ—ಶ್ರೀ ಅವರಿಗೆ, ೧೪೪೧).

ಸಾತವಾಹನರು ಕರ್ನಾಟಕದ ಉತ್ತರ ಭಾಗದವರಾದರೆ, ಪುನ್ನಾಟದ ಅರಸರು ದಕ್ಷಿಣದ ಹೆಗ್ಗಡದೇವನ ಕೋಟೆಯ ಪ್ರದೇಶದವರು. ಕರ್ನಾಟಕದ ರಾಜ ಮನೆತನಗಳಲ್ಲಿ ಇವರೇ ಅತ್ಯಂತ ಪ್ರಾಚೀನರು. ಇವರನ್ನು ಮೊದಲಿಗೆ ಹೆಸರಿಸಿದವ ಪ್ಟೊಲೆಮಿ. ದಿಗಂಬರ ಜೈನ ಸಂಘವೊಂದಕ್ಕೆ ಪುನ್ನಾಟ ಸಂಘವೆಂದೇ ಹೆಸರು. ಸುವಿಖ್ಯಾತ ಜಿನಸೇನಾಚಾರ್ಯರು ಪುನ್ನಾಟ

ದವರೆಂದೇ ಪ್ರತೀತಿ ಇದೆ. ಇವರನ್ನು ಕುರಿತು ವಿವರವಾದ ಶಾಸನಗಳಿಲ್ಲ. ಆದರೆ ಇವರಿಗೂ ಗಂಗ ಕದಂಬರಿಗೂ ಸಂಬಂಧ ವಿದ್ದಿತು. ಈ ರಾಜಮನೆತನಗಳ ಕಾಲದ ಶಾಸನಗಳನ್ನು ಆಧರಿಸಿ ಪೈಯವರು ಪುನ್ನಾಟ ರಾಜರ ಕಾಲ–ವಂಶಾವಳಿಗಳನ್ನು ರೂಪಿಸಿ ದ್ದಾರೆ. ಆ ಪ್ರಕಾರ, ಮೂಲಪುರುಷನಾದ 'ವಿಕ'ನೆಂಬ ರಾಜ ನಿಂದ ಮೊದಲ್ಗೊಂಡು (ಕ್ರಿ.ಶ. ೨ನೇ ಶತ.) ಕ್ರಿ.ಶ. ೪೯೫ರಲ್ಲಿ ತೀರಿಹೋದ ರವಿದತ್ತ ಎಂಬವನ ವರೆಗಿನ ಚರಿತ್ರಾಂಶಗಳನ್ನು ಪೈ ಅವರು ಒದಗಿಸಿದ್ದಾರೆ. ಇದು ಅವರ ಮೌಲಿಕ ಸಂಶೋಧನಾ ಲೇಖಗಳಲ್ಲಿ ಒಂದಾಗಿದೆ (ಪ್ರಭಾತ ೧೯೩೮).

ತಾಳಗುಂದದ ಸುಪ್ರಸಿದ್ಧ ಶಿಲಾಸ್ತಂಭ ಶಾಸನವನ್ನು ಆಧ ರಿಸಿ ಕದಂಬರ ಚರಿತ್ರೆಯನ್ನು ರೈಸರು ಕೊಟ್ಟಿರುವರಷ್ಟೆ. ಅದ ರಲ್ಲಿಯ ಅಸಂದಿಗ್ಧವೆನ್ನಬಹುದಾದ ಹಾಗೂ ಪಳೆಸಿಕ್ಕಾದ ಅಂಶ ಗಳಿಗೆ ವಿವರಣೆ ಕೊಡುತ್ತ ಪೈ ಅವರು ತಿದ್ದಿದ್ದಾರೆ. ಉದಾ.ಗೆ ಮುಕ್ಕಣ್ಣ ಕದಂಬ—ಎಂಬವನು ಇರಲೇ ಇಲ್ಲವೆಂದು ಪೈ ಹೇಳಿದ್ದಾರೆ. ಅದರಂತೆ ಕದಂಬ ಮಯೂರ ಶರ್ಮನು ಅಹಿ ಚ್ಛತ್ರದಿಂದ ಸಾವಿರಾರು ಬ್ರಾಹ್ಮಣರನ್ನು ಕರತಂದ—ಎಂಬುದ ಕ್ಕಿಂತ, ಅವನು ಬನವಾಸಿಯಲ್ಲಿ ನೆಲೆಗೊಂಡ ಮೇಲೆ, ಅವರಾಗಿ ಅಲ್ಲಿಗೆ ಬಂದರೆನ್ನುವುದು ಹೆಚ್ಚು ಸೂಕ್ತ—ಎನ್ನುತ್ತಾರೆ ಪೈ. ಅಂತೂ ಕದಂಬರ ಬಗ್ಗೆ ಇರುವ ಎಲ್ಲ ಶಾಸನಗಳನ್ನೂ ಪೈ ಅವರೂ ತಮ್ಮ ದೃಷ್ಟಿಕೋಣದಿಂದ ವಿಶ್ಲೇಷಿಸಿ, ಈ ರಾಜಮನೆ ತನದ ಆರಂಭಕಾಲದ ೧೩ ಜನ ಅರಸರ (ಮಯೂರ ಶರ್ಮ ನಿಂದ ೨ನೇ ಕೃಷ್ಣ ವರ್ಮನ ವರೆಗಿನವರ) ವಂಶವೃಕ್ಷ, ಕಾಲ ವಿಚಾರ ಮತ್ತು ಅವರ ಆಳ್ವಿಕೆಯಲ್ಲಿ ಜರುಗಿದ ಮಹತ್ವದ ಘಟನೆ ಗಳನ್ನು, Journal of Indian History ಪತ್ರಿಕೆಯ ಮೂರು ಸಂಚಿಕೆಗಳಲ್ಲಿ (೧೯೩೩–೩೪) ವಿವರವಾಗಿ ಹೇಳಿದ್ದಾರೆ. ಲೇಖನದ ಕೊನೆಯಲ್ಲಿ ಕದಂಬರು ಯಾವ ಕಾಲಕ್ಕೂ ಜೈನರಿರ ಲಿಲ್ಲವೆಂಬ ಹೇಳಿಕೆ ಮಹತ್ವದ್ದು.

ಇವರಷ್ಟೇ ಪರಿಶ್ರಮದಿಂದ ಸಿದ್ಧವಾದ ಲೇಖನಮಾಲಿ

ಯೆಂದರೆ ಗಂಗರ ಚರಿತ್ರೆಯನ್ನು ಕುರಿತದ್ದು (Karnatak Hist, Rev. 1932-'33). ಅದಕ್ಕಾಗಿ ಪೈಯವರು ೪೦ಕ್ಕೆ ಮೇಲ್ಪಟ್ಟು ಶಾಸನಗಳನ್ನು ಅವುಗಳ ಪೂರ್ವಾಪರ ಸಹಿತವಾಗಿ ಪರಿವೀಕ್ಷಿಸಿದರು. ಪೈಯವರ ಈ ಸುದೀರ್ಘ ಸಂಶೋಧನೆಯ ಫಲವಾಗಿ, ನಮಗೆ ಗಂಗರ ಆಳ್ವಿಕೆಯ ೬೦೦ ವರ್ಷಗಳ ಸ್ಪಷ್ಟ ಚಿತ್ರಣ ಲಭ್ಯವಾಗಿದೆ (೨೫೦–೮೮೭). ಅನಂತರ ಪಶ್ಚಿಮ ಗಂಗರ ರದ್ದೂ (೯೬೨–೧೦೦೪) ವಂಶಾವಳಿ, ಕಾಲನಿರ್ಣಯ ಇತ್ಯಾದಿ ಗಳನ್ನು ಕೊಟ್ಟಿದ್ದಾರೆ (J. A. H. R. S. 1937–'38).

ಇಂಗ್ಲಿಶ್‌ನಲ್ಲಿ ಬರೆಯಲಾದ ಇವೆರಡೂ ಮನೆತನಗಳ ಚರಿತ್ರ ಲೇಖನದಿಂದ ಪೈಯವರಿಗೆ ಅಖಿಲ ಭಾರತ ವಿದ್ವಾಂಸರೆಂಬ ಮನ್ನಣೆ ದೊರೆಯಿತು. ಗಂಗ, ಕದಂಬರ ಬಗ್ಗೆ ಅನ್ಯ ವಿದ್ವಾಂಸರೂ ಪರಿಶ್ರಮಿಸಿರುವವರಾದರೂ, ಪೈಯವರ ಸಂಶೋಧನೆಯ ವಿಸ್ತಾರ ಹಾಗೂ ಪ್ರಾಮಾಣ್ಯವು ಆದರಣೀಯವೆನಿಸಿದೆ.

ಮುಂದಣ ರಾಜಮನೆತನಗಳಾದ ಚಳುಕ್ಯ ರಾಷ್ಟ್ರಕೂಟರ ವಿಚಾರವಾಗಿ ಆಮೂಲಾಗ್ರವಾದ ಸಂಶೋಧನೆ ಮಾಡುವ ಅಗತ್ಯ ಪೈಯವರಿಗೆ ಬೀಳಲಿಲ್ಲವೇನೊ. ಆದರೆ ಕೆಲವು ಅರಸರ ಆಳಿಕೆಯ ಕಾಲ, ಮತಗಳ ವಿಚಾರವಾಗಿ ಇತರರ ಅಭಿಪ್ರಾಯ ಗಳು ತಪ್ಪೆಂದು ಪೈಯವರಿಗೆ ತೋರಿತು. ಅವನ್ನು ಸಾಧಾರವಾಗಿ ಖಂಡಿಸಿ, ಕೆಲವು ಬಿಡಿವಿಚಾರಗಳನ್ನು ವಿದ್ವಾಂಸರ ಮುಂದೆ ಇರಿಸಿ ದ್ದಾರೆ. ಅವರ ಪ್ರಕಾರ, ನಾ. ಶ್ರೀ ರಾಜಪುರೋಹಿತರು ನಿರ್ಣಯಿಸಿದ ಚಳುಕ್ಯ ವಿಕ್ರಮನ ಪಟ್ಟಬಂಧದ ತೇದಿಯು ಸರಿ ಯಾದುದಲ್ಲ. ಪೈಯವರು ಗೊತ್ತುಪಡಿಸಿದ ತೇದಿಯು ೨೬–೨–೧೦೭೭ (ಪರಿಷತ್ಪತ್ರಿಕೆ, ೧೯೩೦). ರಾಷ್ಟ್ರಕೂಟ ದೊರೆ ನೃಪತುಂಗನು ಜಿನಸೇನಾಚಾರ್ಯನಿಂದ ದೀಕ್ಷೆ ಪಡೆದು, ಜೈನ ನಾದನೆಂದೇ ಪ್ರತೀತಿ ಇದ್ದಿತು. ಗೋವಿಂದ ಪೈ ಅವರು ಅದನ್ನು ಸಾಧಾರವಾಗಿ ಖಂಡಿಸಿ, ಅವನು ವೈಷ್ಣವನೆ ಆಗಿ ಉಳಿದ ಎಂಬುದನ್ನು ವಿಶದೀಕರಿಸಿದ್ದಾರೆ (ಪರಿಷತ್ಪತ್ರಿಕೆ, ೧೯೨೮). ಅದ ರಂತೆ ೨ನೇ ಪುಲಿಕೇಶಿಯ ಕೊನೆಗಾಲ, ಹಾಗೂ ರಾಷ್ಟ್ರಕೂಟ

ಮುಮ್ಮಡಿ ಗೋವಿಂದನ ರಾಜ್ಯಾವಧಿಯ ಬಗ್ಗೆಯೂ ಪ್ರತ್ಯೇಕ ವಾದ ನಿರ್ಣಯಗಳನ್ನು ಮಂಡಿಸಿದ್ದಾರೆ (ಸುಬೋಧ ೧೯೩೨).

ವಿಜಯನಗರ ಸಾಮ್ರಾಜ್ಯವು ತನ್ನ ಉತ್ತರಾರ್ಧ ಕಾಲದಲ್ಲಿಯೂ ಕನ್ನಡ ರಾಜ್ಯವೇ ಆಗಿತ್ತು, ಆಂಧ್ರವಲ್ಲ ಎಂಬ ಮಾತನ್ನು ಬಳ್ಳಾರಿಯ ಮೇಲಿನ ಲೇಖವೊಂದರಲ್ಲಿ ಸ್ಪಷ್ಟಪಡಿಸಿದ್ದಾರೆ. (Welcome Bellary Souvenir 1953). ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ, ಪೈ ಅವರ ಮಹತ್ವದ ಲೇಖನ ಇದೊಂದೇ. ಆದರೆ ಆ ಇತಿಹಾಸವನ್ನು ಕೂಡ ಅವರು ಆಳವಾಗಿ ಅಭ್ಯಸಿಸಿದ್ದರೆನ್ನುವುದಕ್ಕೆ, ಕನ್ನಡ ಕವಿ-ಕಾವ್ಯ ವಿಚಾರದ ಪಲವು ಲೇಖಗಳಲ್ಲಿ ಸಾಕಷ್ಟು ನಿದರ್ಶನಗಳಿವೆ.

## ಪ್ರಾಚೀನ ಭಾರತ

ಭಾರತೀಯ ಇತಿಹಾಸ ವಿಚಾರದಲ್ಲಿ ಕೂಡಾ ಅವರ ಸಂಶೋಧನೆಯು ಪ್ರಾಚೀನ ಕಾಲಕ್ಕೇನೇ ಹೆಚ್ಚು ಸಂಬಂಧಪಟ್ಟಿದೆ. ಹೊರಗಿನಿಂದ ಬಂದ ಶಕ ಮೊದಲಾದವರ ಬಗ್ಗೆಯೂ, ಕೆಲವು ಯುಗ (Era)ಗಳ ಆರಂಭದ ವಿಚಾರದಲ್ಲಿಯೂ, ಮತ್ತು ವಾಕಾಟಕ ಹಾಗೂ ಪಲ್ಲವರ ಸಮಗ್ರ ಚರಿತ್ರೆಯನ್ನು ರೂಪಿಸುವಲ್ಲಿಯೂ, ಪೈಯವರು ಮೌಲಿಕವಾದ ಲೇಖಗಳನ್ನು ಬರೆದಿದ್ದಾರೆ.

ಮೌರ್ಯರ ಪತನದ ಅನಂತರ ಶಕ, ಪಹ್ಲವ, ಕುಶಾಣ, ಮುಂತಾದ ಯವನ ರಾಜರು ವಾಯವ್ಯ ಭಾಗದಿಂದ ಬಂದು ಪದೇಪದೇ ದಾಳಿ ಮಾಡುತ್ತಿದ್ದರು—ಕ್ರಿ.ಶ.ಪೂ. ೨, ೧ನೇ ಶತಮಾನಗಳಲ್ಲಿ. ಅವರಲ್ಲಿ ಕೊನೆಯವರಾದ ಕುಶಾಣರ ರಾಜ ಕನಿಷ್ಕನನ್ನು ಸೋಲಿಸಿ, ಗೌತಮೀಪುತ್ರನು ಕ್ರಿ.ಶ. ೭೮ರಲ್ಲಿ ಸೋಲಿಸಿ, ಸಾತವಾಹನ ರಾಜ್ಯವನ್ನು ನೆಲೆಗೊಳಿಸಿದನು. ಈ ಪ್ರಾಚೀನ ಕಾಲದ ಇತಿಹಾಸ ಮಸಮಸಕಾಗಿದ್ದಿತು. ಆಕರಗಳು ವಿರಳವಾಗಿದ್ದಾಗ ಪೈ ಅವರು ದೂರದೂರದ ಸಹಾಯಕ ಅಂಶಗಳನ್ನು ತಂದು ಆ ಮೂರು ರಾಜಮನೆತನಗಳ ಚರಿತ್ರೆಯನ್ನು ರೂಪಿಸಿದ್ದಾರೆ. ಮೂರು ಭಾಗಗಳುಳ್ಳ ಸುಮಾರು ೧೨೦ ಪುಟ

ಗಳಷ್ಟು ಸುದೀರ್ಘ ಲೇಖವಿದು. ಇದರ ಒಂದು ಭಾಗ ಮಾತ್ರ ೧೯೩೫ರಲ್ಲಿ ಪ್ರಕಟವಾಗಿದ್ದು (J. I. H. 1935). ಮುಂದಿನೆರಡು ಭಾಗಗಳು ಹಸ್ತರೂಪದಲ್ಲಿಯೇ ಉಳಿದಿವೆ.

## ಭಾರತ ಗ್ರೀಕ್ ಸಂಬಂಧ

ವಿಶಾಖದತ್ತನ 'ಮುದ್ರಾರಾಕ್ಷಸ'—ಎಂಬ ಸಂಸ್ಕೃತ ನಾಟಕದಲ್ಲಿ ಚಾಣಕ್ಯನು ಚಂದ್ರಗುಪ್ತನನ್ನು 'ವೃಷಲ' ಎಂದು ಕರೆಯುತ್ತಾನೆ. ಅದೂ ಮೇಲಿಂದ ಮೇಲೆ. ಅದರ ಅರ್ಥವೊ ಶೂದ್ರ ಎಂಬುದಾಗಿ! ಚಾಣಕ್ಯನು ಹಾಗೆ ಕರೆಯುವುದುಂಟೆ? ಪೈಯವರ ಸೂಕ್ಷ್ಮದೃಷ್ಟಿಗೆ ಅದರ ಮೂಲಾರ್ಥವು ಗೋಚರಿಸದಿರಲಿಲ್ಲ. ಈ ಚಂದ್ರಗುಪ್ತನು ಗ್ರೀಕ್ ದೇಶದ ಸೆಲ್ಯುಕಸ್‌ನನ್ನು ಸೋಲಿಸಿದುದೂ, ಆ ಗ್ರೀಕ್ ವೀರನಿಗೆ ದೊರೆ, ಚಕ್ರವರ್ತಿ ಎಂಬರ್ಥವುಳ್ಳ ಬಸಿಲೆಸ್ ಎಂಬ ಬಿರುದು ಇದ್ದುದೂ ಅವರ ಗಮನಕ್ಕೆ ಬಂದಿತು. ಆ ಬಿರುದನ್ನೂ ಚಂದ್ರಗುಪ್ತನು ಸೆಳೆದಿರಬೇಕು ಮತ್ತು ಈಚಿನವನಾದ ನಾಟಕಕಾರ—ವಿಶಾಖದತ್ತನಿಗೆ ಅದು ಗೊತ್ತಾಗದೇ ಹೋಗಿರಬೇಕು ಎಂದು ಪೈಯವರು ಊಹಿಸಿದರು (ಅಭಿವಂದನೆ—ಎ. ಆರ್. ಕೃ. ಅವರಿಗೆ, ೧೯೫೭). ಪ್ರಾಚೀನ ಭಾರತದೊಂದಿಗೆ ಇದ್ದ ಗ್ರೀಕ್ ಸಂಬಂಧವನ್ನು ಹೇಳುವ ಪೈಯವರ ಇನ್ನೊಂದು ಲೇಖವು ಬಿಸನಾಗರ ಎಂಬಲ್ಲಿಯ ಗರುಡಕಂಬವನ್ನು ಕುರಿತದ್ದು. ಈ ಕಂಬದ ಮೇಲೆ ಪ್ರಾಕೃತ ಭಾಷೆಯ ಶಾಸನವನ್ನು ಕೆತ್ತಲಾಗಿದ್ದು (ಕ್ರಿ.ಶ.ಪೂ. ೧೦೫) ಅದು ಹೆಲಿಯೋ ಡೊರಸ್ (ಕ್ರಿ.ಶ.ಪೂ. ೧೦೫) ಎಂಬ ಗ್ರೀಕ್ ರಾಯಭಾರಿಯದಾಗಿದೆ (ತ್ರಿವೇಣಿ, ೧೯೩೭).

ಕ್ರಿಸ್ತಶಕಾರಂಭದ ಒಳಹೊರಗೆ ಭಾರತಕ್ಕೆ ಆಗಮಿಸಿ ರಾಜ್ಯವಾಳಿದ ಇನ್ನೊಬ್ಬ ರಾಜವಂಶೀಯರೆಂದರೆ ಶಕರು. ಅವರಲ್ಲಿ ಮೊದಲಿಗನಾದ ಮಾಬಸ್ (ಕ್ರಿ.ಶ.ಪೂ. ೧೦೫/೧೧೦) ದೊರೆಯಿಂದ ಆರಂಭಿಸಿ ಮುಂದಿನ ಕೆಲವು ಶಕರಾಜರ ಆಳಿಕೆಯ

ಮತ್ತು ಅವರ ಯುದ್ಧ ಯಾತ್ರೆಗಳ ಕಾಲವನ್ನು ಪೈಯವರು ನಿರ್ಧರಿಸಿದ್ದಾರೆ. (J. I. H. 1935).

## ಯುಗಗಳ (Eras) ಆರಂಭದ ಕಾಲ

ಕೆಲವು ಯುಗಗಳ ಆರಂಭದ ಕಾಲವನ್ನು ಪರಿಶೋಧಿಸಿ ಪೈಯವರು ನಿಶ್ಚಿತ ದಿನಾಂಕಗಳನ್ನು ವಿದ್ವಾಂಸರ ಮುಂದೆ ಇರಿಸಿದ್ದಾರೆ. ಶಕರಾಜರನ್ನು ಸೋಲಿಸಿದ ದಿನದಂದು (ಕ್ರಿ.ಶ. ೭೮) ಕನ್ನಡ ದೊರೆ ಸಾತವಾಹನನು ಶಕಯುಗವನ್ನು ಆರಂಭಿಸಿದ ವಿಷಯವು ಈ ಹಿಂದೆಯೇ ಬಂದಿದೆ. ಅದರಂತೆ ಪೈಯವರಿಂದ ನಿರ್ಣೀತವಾದ ಕನಿಷ್ಕ ಯುಗದ ಆರಂಭಕಾಲವು ಕ್ರಿ.ಶ. ೧೩೬।೩೭. ಗುಪ್ತ-ವಲ್ಲಭೀ ಯುಗಗಳು ಒಂದೇ ಎಂಬರ್ಥ ಬರುವಂತೆ ಅಲ್ಬೆರೂನಿ ಬರೆದಿಟ್ಟಿದ್ದಾನೆ. ಅನೇಕ ವಿದ್ವಾಂಸರು ಅದನ್ನು ಸಲೀಸಾಗಿ ಒಪ್ಪಿಕೊಂಡುಬಿಟ್ಟಿದ್ದರು. ಪೈಯವರ ಅನ್ಯ ವ್ಯಾಸಂಗದಲ್ಲಿ ಅದು ತಪ್ಪೆಂದು ಕಂಡುಬಂದಿತು. ಆ ಕಾರಣ ಹೆಚ್ಚಿನ ಸಂಶೋಧನೆಯನ್ನು ನಡೆಸಿ ಕ್ರಿ.ಶ. ೨೭೨ರಂದು ಆರಂಭವಾದ ಗುಪ್ತಯುಗವು ೩೬೬ರಲ್ಲಿ ಲುಪ್ತವಾದ ಮೇಲೆಯೇ ವಲ್ಲಭೀ ಯುಗವು ಆರಂಭವಾಯಿತು ಎಂಬ ಹೊಸ ಮಾತನ್ನು ಮುಂಡಿಸಿದರು (J. I. H. 1932-33).

## ವಾಕಾಟಕರು, ಪಲ್ಲವರು

ಪ್ರಾಚೀನ ಭಾರತದಲ್ಲಿ ರಾಜ್ಯವಾಳಿದ ಈ ಎರಡು ರಾಜಮನೆತನಗಳ ಬಗ್ಗೆ ಇರುವ ಪೈಯವರ ಸಂಶೋಧನ ಬರಹಗಳು ವಿಶೇಷ ಅಧ್ಯಯನದ ಫಲಗಳಾಗಿವೆ. ಯಥಾಪ್ರಕಾರ ಸಂಬಂಧಪಟ್ಟ ಎಲ್ಲ ಶಾಸನಗಳನ್ನು ಅಭ್ಯಸಿಸಿ ವಿಂಧ್ಯಪ್ರದೇಶದ ವಾಕಾಟಕರ (ಕ್ರಿ.ಶ. ೧೭೪–೫೧೫) ಮತ್ತು ದಕ್ಷಿಣ ಭಾರತದಲ್ಲಿ ಆಳಿದ ಪಲ್ಲವರ (ಕ್ರಿ.ಶ. ೮೭–೯೦೦) ವಂಶವೃಕ್ಷ, ರಾಜ್ಯಭಾರದ ತೇದಿಗಳು ಪ್ರಮುಖ ಘಟನೆಗಳು—ಇವನ್ನೆಲ್ಲ ನಿರೂಪಿಸಿದ್ದಾರೆ.

ವಾಕಾಟಕರಿಗೆ ಚೇದಿಯರಸರ ಅದರಂತೆ ಪಲ್ಲವರಿಗೆ ಚೋಳ ರಾಜರ ಪರಸ್ಪರ ಸಂಬಂಧ ಇದ್ದಿತಷ್ಟೆ. ಮೇಲಣ ಲೇಖನಗಳಲ್ಲಿ ಚೇದಿ ಚೋಳ ಅರಸುಮನೆತನಗಳ ಸಮಗ್ರ ಚರಿತ್ರೆಯೂ ಜೊತೆಯಾಗಿ ಮೂಡಿಬಂದಿದೆ (J. I. H. 1935 & J. A. H. R. S. 1932-34).

ಹೀಗೆ ಪ್ರಾಚೀನ ಭಾರತ ಇತಿಹಾಸದ ಕೆಲವು ಅಪರಿಚಿತ ಮುದ್ದೆ ಗಳನ್ನು ಎತ್ತಿಕೊಂಡು ಪೈಯವರು ಮೌಲಿಕವಾದ ಶೋಧವನ್ನು ವಿದ್ವಾಂಸರೆದುರು ಮಂಡಿಸಿದರು. ವಿಶೇಷತಃ ಕದಂಬರು, ಗಂಗರು, ವಾಕಾಟಕ ಹಾಗೂ ಪಲ್ಲವರ ಚರಿತ್ರೆಗಳ ಪುನರ್ರಚನೆ ಯಲ್ಲಿ ಪೈಯವರ ಸಂಶೋಧನವು ಸ್ವೋಪಜ್ಞವಾದ ಮೌಲಿಕ ಕೊಡುಗೆಯಾಗಿದೆ.

## ಧಾರ್ಮಿಕ ಸಂಶೋಧನೆ

ಮತಧರ್ಮದ ಪ್ರತ್ಯೇಕ ವಿಭಾಗವನ್ನು ನಾವು ಇಲ್ಲಿ ಕೊಡು ತ್ತಿದ್ದರೂ, ಈ ಬಗೆಯ ಲೇಖಗಳಲ್ಲಿ ಐತಿಹಾಸಿಕ ದೃಷ್ಟಿಯೇ ಪ್ರಮುಖವಾಗಿದೆ. ಎಂದರೆ ಅವರು ಯಾವುದೇ ಧರ್ಮದ ಪ್ರಕ್ರಿಯೆಗಳನ್ನು ವಿಮರ್ಶಿಸ ಹೋಗಿಲ್ಲ. ಜೈನ, ಬೌದ್ಧ, ವೀರ ಶೈವ—ಇವುಗಳಿಗೆ ಸಂಬಂಧಿಸಿದ ಕೆಲವು ಐತಿಹಾಸಿಕ ಅಂಶ ಗಳನ್ನೂ, ವ್ಯಕ್ತಿಗಳ ಜೀವನ, ಕಾಲಗಳನ್ನು ಕುರಿತು ವಿವೇಚಿಸಿ ದ್ದಾರೆ. ಅವುಗಳಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ತತ್ರಾಪಿ ಬಾಹುಬಲಿ–ಗೊಮ್ಮಟೇಶ್ವರನನ್ನು ಕುರಿತು ಅವರ ಸಂಶೋಧ ನೆಯು ಎದ್ದುಕಾಣುವಂತಿದೆ.

### ಗೊಮ್ಮಟೇಶ್ವರ

ಜೈನ ಪುರಾಣಗಳಲ್ಲಿ ಬಾಹುಬಲಿಯ ಕಥೆ ಅತ್ಯಂತ ಪ್ರಸಿದ್ಧ ವಾದುದು. ತೀರ್ಥಂಕರರಿಗಿಂತಲೂ ಮುಂಚೆಯೇ ನಿರ್ವಾಣ ವನ್ನು ಪಡೆದ ಮಹಾತ್ಮನಿವನು. ತನ್ನ ಈ ತಮ್ಮನ ನೆನಪಿಗಾಗಿ

ಭರತನು ಪೌದನಪುರದಲ್ಲಿ ಮೂರ್ತಿಯನ್ನು ನಿಲ್ಲಿಸಿದನಂತೆ. ಅಂದಿನಿಂದ ಬಾಹುಬಲಿ ಪ್ರತಿಮೆಯು ಉಪಾಸನೆಗೆ ಮೊದಲಾಯಿತು. ಕರ್ನಾಟಕದಲ್ಲಿ ಅದು ವಿಶೇಷ ಪ್ರಾಶಸ್ತ್ಯವನ್ನು ಪಡೆದುದರ ಕಾರಣವೆಂದರೆ ಮೊಟ್ಟಮೊದಲಿನ ಹಾಗೂ ಅತಿ ಎತ್ತರದ ಬಾಹುಬಲಿ ಮೂರ್ತಿಯು ಕರ್ನಾಟಕದ ಶ್ರವಣಬೆಳ್ಗೊಳದಲ್ಲಿ ಇದೆಯಲ್ಲದೆ, ಕಾರ್ಕಳ, ವೇಣೂರು ಈ ಎರಡು ಊರುಗಳಲ್ಲಿಯೂ ಬೃಹದಾಕಾರದ ಮೂರ್ತಿಗಳಿವೆ.

೧೯೨೫ರ ಸುಮಾರಿಗೆ ಶ್ರವಣಬೆಳ್ಗೊಳದಲ್ಲಿ ಗೊಮ್ಮಟ ಮೂರ್ತಿಯ ಮಹಾಮಸ್ತಕಾಭಿಷೇಕವು ಜರುಗಿದುದರ ನಿಮಿತ್ತವಾಗಿ, ಈ ವಿಷಯಕವಾದ ಅಭ್ಯಾಸಕ್ಕೆ ಪೈಯವರಿಗೆ ಪ್ರಚೋದನೆ ದೊರೆತಿರಬೇಕು. ಅವರು ಬಾಹುಬಲಿಯನ್ನು ಕುರಿತು ಜೈನ ಪುರಾಣ, ಕಾವ್ಯ ಮತ್ತು ಶಾಸನಗಳಲ್ಲಿ ಉಕ್ತವಾಗಿರುವ ಎಲ್ಲ ಅಂಶಗಳನ್ನು ಪರಿಶೀಲಿಸಿ, ಅವುಗಳ ಆಧಾರದಿಂದ ಅವನ ನಿರ್ದುಷ್ಟವಾದ ಚರಿತ್ರೆಯನ್ನು ಬರೆದಿದ್ದಾರೆ. ಆ ಬಳಿಕ ಪೈಯವರು ಕರ್ನಾಟಕದ ಮೂರು ಊರುಗಳಲ್ಲಿರುವ ಗೊಮ್ಮಟ ಮೂರ್ತಿಗಳ ಸ್ಥಾಪನೆ ಮತ್ತು ಹಿನ್ನೆಲೆಯನ್ನು ಕೊಟ್ಟಿದ್ದಾರೆ:

| ಊರು | ದಿನ | ಕಟ್ಟಿಸಿದವರು |
| --- | --- | --- |
| ಶ್ರವಣಬೆಳ್ಗೊಳ | ೧೩ ಮಾರ್ಚ್ ೯೮೧ | ಮಂತ್ರಿ ಚಾವುಂಡರಾಯ |
| ಕಾರ್ಕಳ | ೧೩ ಫೆಬ್ರುವರಿ ೧೪೩೨ | ಭೈರವ ದೊರೆ ವೀರಪಾಂಡ್ಯ |
| ವೇಣೂರು | ೧ ಮಾರ್ಚ್ ೧೬೦೪ | ಅಜಿಲರಸು ತಿಮ್ಮಣ್ಣ |

ಅವರು ಪ್ರತಿಪಾದಿಸಿದ "ಗೊಮ್ಮಟ" ಶಬ್ದದ ನಿಷ್ಪತ್ತಿ ಮಾತ್ರ ನಾಡಿನಲ್ಲಿ ವಾದ–ವಿವಾದಕ್ಕೆ ಎಡೆಗೊಟ್ಟಿತು. 'ಮನ್ಮಥ' ಈ ಸಂಸ್ಕೃತ ಶಬ್ದವು ಪ್ರಾಕೃತದಲ್ಲಿ 'ಗಮ್ಮಹ' ಎಂದಾಯಿತು. ಅಲ್ಲಿಂದ ಅದು ಕನ್ನಡಕ್ಕೆ ಬಂದು, ಗುಮ್ಮಟ ಗೊಮ್ಮಟವಾಗಿ

ಉಳಿದುಕೊಂಡಿತು—ಎಂಬುದು ಪೈ ಅವರ ರೂಪನಿಷ್ಪತ್ತಿ. ಪ್ರಾಕೃತ ನಿಷ್ಪತ್ತಿಯು ತಪ್ಪು ಎಂದು ಕಂಡುಬಂದ ಮೇಲೆ, ತಮ್ಮ ಮೊದಲಿನ ನಿಲುಮೆಯನ್ನು ತಿದ್ದಿಕೊಂಡು, 'ಮನ್ಮಥ'ದ ನೇರವಾದ ಕನ್ನಡ ತದ್ಭವ ಗೊಮ್ಮಟ' ಆಗಿರಬೇಕು—ಎಂಬ ನಿರ್ಣಯಕ್ಕೆ ಬಂದರು (ಕ.ಸಾ.ಪ. ೧೯೪೨).

## ತೀರ್ಥಂಕರರ ಚರಿತ್ರೆ

ಜೈನ ತೀರ್ಥಂಕರರಲ್ಲಿ ಅನೇಕರು ಐತಿಹಾಸಿಕ ವ್ಯಕ್ತಿಗಳೇ ಆಗಿದ್ದರೂ, ಅವರು ಅತಿ ಪ್ರಾಚೀನ ಕಾಲದವರಾದ್ದರಿಂದ, ಪೌರಾಣಿಕ ವ್ಯಕ್ತಿಗಳೆಂದೇ ಪರಿಭಾವಿಸುವ ಪರಿಸ್ಥಿತಿ ಇದೆ. ಗೋವಿಂದ ಪೈಯವರು ಪಾರ್ಶ್ವನಾಥ ತೀರ್ಥಂಕರನ ಚರಿತ್ರೆಯನ್ನು ಬರೆದಿದ್ದಾರೆ. ಮತ್ತು ಅವನ ಬಗ್ಗೆ ಸಾಧ್ಯವಾದಷ್ಟು ಐತಿಹಾಸಿಕ ದಾಖಲೆಗಳನ್ನು ಕೊಟ್ಟಿದ್ದಾರೆ (ಉದಯಭಾರತ, ೧೯೨೮–'೨೯). ಸು. ೨೭–೨೮೦೦ ವರ್ಷಗಳ ಹಿಂದಿನ ಇಂಥ ಉಲ್ಲೇಖಗಳನ್ನು ಊಹಿಸುವುದು ಸುಲಭದ ಮಾತೇನಲ್ಲ.

ತೀರ್ಥಂಕರರಲ್ಲಿ ಕೊನೆಯವನಾದ ಮಹಾವೀರಸ್ವಾಮಿಯ ಬಗ್ಗೆ, ತಮ್ಮ ಸಂಶೋಧನೆಯಲ್ಲಿ ಪೈಯವರು ಹೆಚ್ಚಿನ ಸಿದ್ಧಿಯನ್ನು ಪಡೆದಿದ್ದಾರೆ. ಅವನ ಚರಿತ್ರೆಯನ್ನು ಅತ್ಯಂತ ನಿರ್ದಿಷ್ಟವಾಗಿ ರೂಪಿಸಿ, ಖಚಿತವಾದ ಕಾಲ ತಿಥಿಗಳನ್ನು ಕೊಟ್ಟಿದ್ದಾರೆ. ಅವರು ಗೊತ್ತುಪಡಿಸಿದ ಮಹಾವೀರನ ಜನನ ಕಾಲವು ಕ್ರಿ.ಶ. ಪೂ. ೨೭ ಫೆಬ್ರುವರಿ ೫೯೮; ಪರಿನಿರ್ವಾಣ ಕಾಲವು ೨೬ ಸೆಪ್ಟೆಂಬರ್ ೫೨೮ (ಪರಿಷತ್ಪತ್ರಿಕೆ, ೧೯೫೦).

ಜೈನಧರ್ಮ ವಿಷಯಕವಾದ ಅನ್ಯ ಲೇಖನಗಳಲ್ಲಿ ಬಂದ ಕೆಲ ಬಿಡಿ ವಿಚಾರಗಳು ಗಮನಿಸುವಂತಹವಿವೆ. ಬುದ್ಧನ ಕಥೆ ಸಾಮಂತಿಗಳಿರುವ ಧಮ್ಮಪದದಲ್ಲಿ ಕಂಡುಬರುವ ಜೈನಮತದ ಉಲ್ಲೇಖಗಳ ಮೂಲಕ ಜೈನ ಬೌದ್ಧ ಧರ್ಮಗಳ ಸಂಧಿಕಾಲದ ಚಿತ್ರವನ್ನು ಕೊಟ್ಟಿದ್ದಾರೆ (I. H. Q. 1927). ಭಾರತದಾದ್ಯಂತ ಆಚರಿಸಲ್ಪಡುವ ಶಿವರಾತ್ರಿಯಂದೇ ಪ್ರಥಮ ತೀರ್ಥಂಕರನಾದ

ಪ್ರದೇಶದ ನಿರ್ವಾಣಭೂಮಿಯಿಂದ ಅದು ಜಿನರಾತ್ರಿಯೂ ಹೌದೆಂದು ತೋರಿಸಿಕೊಟ್ಟಿದ್ದಾರೆ. ಜೈನರಲ್ಲಿ ದೇಶೀಗಣವೆಂಬ ಪಂಗಡವಿದೆಯಲ್ಲ: ಅದು 'ದೇಶಸ್ಥ'ರು ನೆಲೆಗೊಂಡಿರುವ ಪ್ರದೇಶವಲ್ಲಿಯೂ ಜೈನರಿಗೆ ಬಂದ ಹೆಸರೇ ಅಲ್ಲದೆ ಬೇರೇನಲ್ಲ ಎಂದು ವಿವರಣೆ ನೀಡಿದ್ದಾರೆ (Jaina Antiquary, 1935).

## ಭೌದ್ಧ ಧರ್ಮ

ಬೌದ್ಧಧರ್ಮದ ವಿಚಾರದಲ್ಲಿ ಪೈಂಯುವರ ಮುಖ್ಯ ಸಂಶೋಧನೆ ಎಂದರೆ ಬುದ್ಧನ ಚರಿತ್ರೆ ಮತ್ತು ಅವನ ಬದುಕಿನ ಕೆಲ ಪ್ರಮುಖ ಘಟನೆಗಳ ಕಾಲನಿರ್ಣಯ. ಬುದ್ಧನಾದರೂ ಮಹಾವೀರನಂತೆಯೇ ಅತ್ಯಂತ ಪ್ರಾಚೀನ ವ್ಯಕ್ತಿ. ಅಲ್ಲದೆ ಅವನ ಚರಿತ್ರೆಯು ಪುರಾಣಗಳಲ್ಲಿ ಜಾತಕಕಥೆಗಳಲ್ಲಿ ಹೆಚ್ಚಾಗಿ ಅಡಕವಾಗಿದ್ದುದು. ಅವುಗಳಿಂದ ಸತ್ಯಾಂಶಗಳನ್ನು ಹುಡುಕಿ ತೆಗೆಯುವ ಕೆಲಸವನ್ನು ಪೈಂಯುವರು ಕೈಕೊಂಡರು. ಅವನ ಚರಿತ್ರೆ ಇರುವ ಪೈಂಯುವರ ಪುಸ್ತಿಕೆಯಲ್ಲಿ (ತರುಣ ಕಲಾವೃಂದ ೧೯೫೪) ಉಕ್ತವಾದ ಕೆಲವು ತೇದಿಗಳು ಇಂತಿವೆ: ಜನ್ಮ ತಾಳಿದುದು: ಕ್ರಿ.ಶ.ಪೂ. ೩೦ ಮಾರ್ಚ್ ೫೮೧. ಗೃಹತ್ಯಾಗ: ೧೮ ಜೂನ್ ೫೫೩. ಬುದ್ಧನಾದುದು: ೩ ಏಪ್ರಿಲ್ ೫೪೬. ಮತ್ತು ಪರಿನಿರ್ವಾಣ: ೧೫ ಏಪ್ರಿಲ್ ೫೦೧. ಗೃಹತ್ಯಾಗದ ತೇದಿಯೊಂದನ್ನು ಬಿಟ್ಟು ಉಳಿದ ಮೂರೂ ತೇದಿಗಳು ವೈಶಾಖ ಪೂರ್ಣಿಮೆಗೆ ಸಮನಾಗಿವೆ. ಈ ಬಗೆಯ ವೈಚಿತ್ರ್ಯ ಪೈಗಂಬರ್ ಶೇಕ್ಸಪಿಯರ್—ಇವರ ಬದುಕಿನಲ್ಲಿಯೂ ಕಂಡುಬರುತ್ತದೆ.

ಬುದ್ಧ ಜೀವನದ ಐತಿಹಾಸಿಕ ಸಂಗತಿಗಳನ್ನು ಪರಿಶೀಲಿಸುತ್ತಿದ್ದಾಗ ಬುದ್ಧನ ಭವ್ಯ ವ್ಯಕ್ತಿತ್ವವು ಪೈಂಯುವರ ಕವಿಹೃದಯವನ್ನು ತಟ್ಟಿತು. ವಿಶೇಷತಃ ಅವನ ಕಥೆಯು ದಿವ್ಯ ಅರ್ಥಪೂರ್ಣವಾಗಿ ಕಂಡಿತು. ಅದನ್ನೇ ತಮ್ಮ ವೈಶಾಖಿ—ಖಂಡಕಾವ್ಯದಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ.

## ವೀರಶೈವ

ಗೋವಿಂದ ಪೈ ಅವರು ವಿವಿಧ ಸಂದರ್ಭಗಳಲ್ಲಿ ಹಲವು ವೀರ ಶೈವ ಮಹಾತ್ಮರ ಕಾಲನಿರ್ಣಯ ಮಾಡಿದ್ದಾರೆ. ಬಸವೇಶ್ವರನ ಉಲ್ಲೇಖವಿರುವ ಹತ್ತಾರು ಶಾಸನಗಳನ್ನು ವಿಶೇಷತಃ ಅರ್ಜುನ ವಾಡದ ಶಿಲಾಶಾಸನವನ್ನು ಕೂಲಂಕಷ ವಿವೇಚನೆಗೆ ಒಳಪಡಿಸಿ ಬಸವೇಶ್ವರನ ವಂಶಾವಳಿ ಹಾಗೂ ಅವನ ಜೀವನದ ಮಹತ್ವದ ಘಟನೆಗಳ ಕಾಲವನ್ನು ನಿರ್ಣಯಿಸಿದ್ದಾರೆ. ಈ ಪ್ರಸಂಗದಲ್ಲಿ ಅವರು ಬಿಜ್ಜಳನಿಗೆ ಸಂಬಂಧಿಸಿದಂತೆ ವಿಶೇಷ ಊಹನೆ ಮಾಡಿದ್ದಾರೆ. ಅದೆಂದರೆ ಅವನ ಮುಪ್ಪಿನ ಕಾಲದಲ್ಲಿ ಕಂದರನೆಂಬ ಅವನ ಮೊಮ್ಮಗನು ಕೊಟ್ಟಿರಬಹುದಾದ ಉಪಟಳ (ಮೂರು ಉಪನ್ಯಾಸಗಳು ೧೯೪೦). ಪೈಯವರು ಗೊತ್ತುಪಡಿಸಿದ ಇನ್ನೊಬ್ಬ ವೀರಶೈವ ಶರಣನ ಕಾಲವೆಂದರೆ ದೇವರದಾಸಿ ಮಾರ್ಯನದು (ದೇವರದಾಸಿಮಾರ್ಯ ಪ್ರಶಸ್ತಿ ೧೯೫೩). ಪೈ ಯವರು ನಿರ್ಧರಿಸಿದಂತೆ ಅವನು ಕ್ರಿ.ಶ.ಸು. ೯೮೦ರಂದು ಜನಿಸಿ ೧೦೪೦ರ ವರೆಗೆ ಜೀವಿಸಿದ್ದನು.

ಅದರಂತೆ ನಾಲ್ವರು ವೀರಶೈವ ಆಚಾರ್ಯರ ಕಾಲವನ್ನು (ಪ್ರಾಯಶಃ 'ಶರಣ ಸಾಹಿತ್ಯ'ದ ಸಂಪಾದಕರ ಕೋರಿಕೆಯ ಮೇರೆಗೆ) ಖಚಿತಪಡಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆ ತೇದಿಗಳು ಇಂತಿವೆ:

| | | |
|---|---|---|
| ರೇವಣಸಿದ್ಧ | ಕ್ರಿ.ಶ. ಸುಮಾರು | ೧೦೯೫–೧೧೯೦ |
| ಮರುಳಸಿದ್ಧ | ,, | ೧೧೨೦–೧೨೦೫ |
| ಏಕೋರಾಮ ತಂದೆ | ,, | ೧೧೨೫–೧೧೭೫ |
| ಮಲ್ಲಿಕಾರ್ಜುನ ಪಂಡಿತಾರಾಧ್ಯ | ,, | ೧೧೪೦–೧೧೭೯ |

ಇವೆಲ್ಲ ತೇದಿಗಳು ಸಾಮಾನ್ಯವಾಗಿ ಪಂಡಿತಮಾನ್ಯವಾಗಿವೆ.

## ಭಕ್ತಿಯೋಗ

ಗೋವಿಂದ ಪೈ ಅವರು ಕೆಲವು ತಾತ್ವಿಕ ಲೇಖನಗಳನ್ನೂ ಬರೆದಿದ್ದಾರೆ. ವಿಶೇಷತಃ ಭಕ್ತಿಯೋಗದ ವಿವೇಚನೆ ಮಾಡಿ,

(ಪ್ರಭಾತ, ೧೯೪೬) ಪುರಂದರದಾಸರ ಕೀರ್ತನೆಗಳಲ್ಲಿಯೂ, ರಮಣಮಹರ್ಷಿಗಳ ಜೀವನದಲ್ಲಿಯೂ ಅದು ಅಭಿವ್ಯಕ್ತಗೊಂಡ ಬಗೆಯನ್ನು ಪ್ರತ್ಯೇಕ ಲೇಖಗಳಲ್ಲಿ ವಿವರಿಸಿದ್ದಾರೆ. ಅಲ್ಲದೆ ಉರಗಸೂಕ್ತ, ನಾರದ ಭಕ್ತಿಸೂತ್ರ, ಸಿಗಾಲಸುತ್ತ, ಉಪದೇಶ ರತ್ನಮಾಲೆ—ಇವೇ ಮೊದಲಾದ ಪ್ರಾಚೀನ ಗ್ರಂಥಗಳನ್ನು ಪರಿಶೀಲಿಸುತ್ತಿದ್ದಾಗ, ಅವುಗಳಲ್ಲಿಯ ಕೆಲವು ಉದಾತ್ತ ವಿಚಾರಗಳಿಗೆ ಮಾರುಹೋಗಿ ಅಷ್ಟಷ್ಟು ಭಾಗವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

## ೩. ಕನ್ನಡ ಸಾಹಿತ್ಯ

ಪೈಯವರ ಸಂಶೋಧನ ಕಾರ್ಯದಲ್ಲಿ ಇತಿಹಾಸಕ್ಷೇತ್ರದಷ್ಟೇ ಮಹತ್ವದ ಸ್ಥಾನವು ಹಳಗನ್ನಡ ಕವಿ, ಕಾವ್ಯ ಸಂಶೋಧನೆಗೆ ಇದೆ. ನಮ್ಮ ಪ್ರಾಚೀನ ಕವಿಗಳ ಕಾಲ, ದೇಶ, ಮತಗಳ ವಿವೇಚನೆಯೂ ಇತಿಹಾಸದ ಮಹತ್ವದ ಅಂಗವೇ ಆಗಿದೆ. ಈ ಕಾಲನಿರ್ಣಯಾದಿ ವಿಚಾರದಲ್ಲಿ ಹಲವಾರು ಕನ್ನಡ ವಿದ್ವಾಂಸರು ಕೃಷಿ ಮಾಡಿದವರಿದ್ದಾರೆ. ಆದರೆ ಈ ದಿಸೆಯಲ್ಲಿ ಆರ್. ನರಸಿಂಹಾಚಾರ್ಯರ ನಂತರ ಪೈಯವರ ಪರಿಶ್ರಮವೇ ಗುಣ, ಗಾತ್ರದಲ್ಲಿ ಹಿರಿದು ಎಂದು ತೋರುತ್ತದೆ.

### ಕನ್ನಡ ಸಾಹಿತ್ಯದ ಪ್ರಾಚೀನತೆ

ಕವಿ-ಕಾವ್ಯ ವಿಚಾರದ ಮೊದಲು ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಕುರಿತ ಪೈಯವರ ಮಹತ್ವದ ಕೊಡುಗೆಯನ್ನು ಗಮನಿಸಬಹುದು. ನೃಪತುಂಗನ ಕವಿರಾಜಮಾರ್ಗದಲ್ಲಿ, ತತ್ಪೂರ್ವದ ಸಾಹಿತ್ತಿಕ ಕುರುಹುಗಳೇನಿವೆಯೊ ಅವೆಲ್ಲವನ್ನೂ ಹಿಂಜಿ ತೋರಿಸಿ, ನೃಪತುಂಗನಿಗಿಂತ ೨೦೦ ವರ್ಷದಷ್ಟು ಹಿಂದಿನ ಕನ್ನಡ ಸಾಹಿತ್ಯ ವಾಹಿನಿಯನ್ನು ಅರಸಿಕೊಂಡು ಹೋದರು. ಇವು

ಮೊದಲ ಘಟ್ಟ. ಅಲ್ಲಿಂದ, ೫ರಿಂದ ೭ನೆಯ ಶತಮಾನಗಳ ಸಂಸ್ಕೃತ ಭಾಷೆಯ ಶಾಸನಗಳನ್ನು ಪರಿಶೀಲಿಸಿ, ಕನ್ನಡದಲ್ಲಿ ಪ್ರಧಾನವಾದ ವೃತ್ತಗಳ ಬಳಕೆಯ ಮಹತ್ತ್ವವನ್ನು ಎತ್ತಿ ಹೇಳಿದ್ದಾರೆ. ೪–೬ನೇ ಶತಮಾನಗಳ, ಕನ್ನಡ ಭಾಷೆಯಲ್ಲೇ ಇರುವ ಶಾಸನಗಳ ಪರಿಶೀಲನೆಯಿಂದ ಸಂಸ್ಕೃತ ಮಿಶ್ರ ಕನ್ನಡ ಪದ್ಯ ಸಾಹಿತ್ಯವು ಇತ್ತು ಎಂಬುದನ್ನು ಹೊರಗೆಡಹಿದ್ದಾರೆ. ಇದಲ್ಲದೆ ಚೂಡಾಮಣಿ (ವ್ಯಾಖ್ಯಾ) ಮತ್ತು ವೊಡ್ಡಾರಾಧಣೆ—ಈ ಗದ್ಯ ಗ್ರಂಥಗಳು ಆ ಕಾಲದವೇ ಎಂಬ ನಿಲುವೆಯನ್ನು ತಳೆದಿದ್ದಾರೆ. ಅಂತೂ, ಕನ್ನಡ ಸಾಹಿತ್ಯದ ಆರಂಭಕಾಲವು ಇದರಿಂದಾಗಿ ಕ್ರಿ.ಶ. ೩ನೆಯ ಶತಮಾನದಷ್ಟು ಹಿಂದೆ ಸರಿಯಿತು. ಅದಕ್ಕೂ ಹಿಂದೆ ಹೋಗಿ, ಗಾಥಾ ಸಪ್ತಶತಿಯಲ್ಲಿಯೂ, ಗ್ರೀಕ್ ಪ್ರಹಸನವೊಂದರಲ್ಲಿಯೂ ಬಂದಿರುವ ಕನ್ನಡ ಶಬ್ದಗಳನ್ನು ಕಂಡುಹಿಡಿದು, ಕನ್ನಡದ ಪ್ರಾಚೀನತೆಯನ್ನು ಕ್ರಿಸ್ತಶಕದ ಆರಂಭಕ್ಕೆ ತಂದು ನಿಲ್ಲಿಸಿದರು (ಮೂರು ಉಪನ್ಯಾಸಗಳು, ೧೯೪೧). ಹೀಗೆ ನಮ್ಮ ಭಾಷೆ ಹಾಗೂ ಸಾಹಿತ್ಯಗಳ ಪ್ರಾಚೀನತೆಯನ್ನು ಸಾಧಿಸಿದರು. ಅದರಂತೆ ಕನ್ನಡ ನಾಟಕದ ಪ್ರಾಚೀನತೆಯನ್ನು ಕುರಿತ ಬೇರೊಂದು ಲೇಖದಲ್ಲಿ (ಯುಗಪುರುಷ, ೧೯೫೬) ಕನ್ನಮಯ್ಯ ಎಂಬವನು ಕನ್ನಡದ ಆದಿಮ ನಾಟಕಕಾರನು (೯ನೇ ಶತಮಾನ) ಎಂಬುದನ್ನು ಕಂಡು ಹಿಡಿದಿದ್ದಾರೆ.

## ಹಳಗನ್ನಡ ಕವಿ ಕಾಲನಿರ್ಣಯ

ಕನ್ನಡ ಕವಿಗಳ ಮತ್ತು ಕೃತಿಗಳ ಕಾಲನಿರ್ಣಯಕ್ಕೆ ಆ ಗ್ರಂಥಗಳಲ್ಲಿಯ ಪ್ರಮಾಣಗಳಲ್ಲದೆ ದೂರದೂರದ ಅನ್ಯ ಪ್ರಮಾಣಗಳನ್ನೂ ಆಧಾರಕ್ಕೆಟ್ಟುಕೊಂಡು, ಮಹತ್ತ್ವಪೂರ್ಣ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಕವಿಗಳ ಕಾಲಾನುಕ್ರಮದಲ್ಲಿ, ಅವನ್ನು ಹೀಗೆ ಕ್ರೋಢೀಕರಿಸಬಹುದು:

**ಪಂಪ:** ಮೊದಲಿಗೆ, ಪಂಪನ ಪೋಷಕ ದೊರೆಯಾದ ಅರಿಕೇಸರಿಯ ವಂಶಾವಳಿ, ದೇಶ ಮತ್ತು ಕಾಲಗಳನ್ನು ಮೂರು

ಶಾಸನಗಳ ಸಹಾಯದಿಂದ ನಿರ್ದಿಷ್ಟಪಡಿಸಿದ್ದಾರೆ. ಅಲ್ಲಿಂದ ಪಂಪನ ದೇಶ, ಕಾಲಗಳನ್ನು ಕೂಲಂಕಷವಾಗಿ ಪರಿಶೋಧಿಸಿದ್ದಾರೆ. ಪಂಪನು ಬನವಾಸಿಯಲ್ಲಿ ಹುಟ್ಟಿ ಪುಲಿಗೆರೆಯ ಸಾಜದ ತಿರುಳ್ಗನ್ನಡದಲ್ಲಿ ವಿದ್ಯಾಭ್ಯಾಸ ಮುಗಿಸಿ, ಕ್ರಿ.ಶ. ೯೩೨–೯೪೨ರ ನಡುವಣ ಅವಧಿಯಲ್ಲಿ ಅರಿಕೇಸರಿಯ ಆಸ್ಥಾನಕ್ಕೆ ಬಂದನೆಂಬುದನ್ನು ನಿರೂಪಿಸಿದ್ದಾರೆ. ಪಂಪನ ಆದಿಪುರಾಣದ ರಚನಾಕಾಲವನ್ನು ಪ್ರತ್ಯೇಕವಾದ ಪರಾಮರ್ಶೆಗೆ ತೆಗೆದುಕೊಂಡು, ಆ ಕಾವ್ಯವು ೧ನೇ ಅಕ್ಟೋಬರ್ ೯೪೨ರಂದು ರಚಿತವಾಯ್ತೆಂದು ತೋರಿಸಿಕೊಟ್ಟಿದ್ದಾರೆ (ಪಂಪ ಮಹಾಕವಿ, ೧೯೫೧).

ರನ್ನ: ಹಳಗನ್ನಡ ಕವಿಗಳ ಸಂಶೋಧನೆಯಲ್ಲಿ ಪೈಯವರು ಮೊದಲಿಗೆ ತೆಗೆದುಕೊಂಡದ್ದು ರನ್ನನನ್ನೇ. ಕರ್ನಾಟಕ ಕಾವ್ಯ ಕಲಾನಿಧಿಯವರಿಂದ ಪ್ರಕಟವಾದ 'ಗದಾಯುದ್ಧ'ದ ಪೀಠಿಕೆಯಲ್ಲಿರುವ ದೋಷ, ಲೋಪಗಳನ್ನು ೧೯೨೮ರಷ್ಟು ಹಿಂದೆಯೇ ಎತ್ತಿ ತೋರಿಸಿದರು (ಉದಯಭಾರತ). ರನ್ನನೆಂಬ ಹೆಸರಿನ ಕವಿಗಳು ಇಬ್ಬರಿದ್ದಾರೆ ಎಂಬ ಅಭಿಪ್ರಾಯವೊಂದು ವ್ಯಕ್ತವಾದಾಗ ಪೈಯವರ ಸಂಶೋಧನ ಬುದ್ಧಿಯು ಕನಲಿತು. ಆಧಾರಗಳ ಮೇಲೆ ಆಧಾರಗಳನ್ನು ತೂರಿ, ಜಯಕರ್ನಾಟಕದಲ್ಲಿ (೧೯೩೭) ಸುದೀರ್ಘ ಲೇಖನಮಾಲೆಯನ್ನ ಬರೆದು, ಗದಾಯುದ್ಧ ಮತ್ತು ಅಜಿತಪುರಾಣಗಳ ಕರ್ತೃ ಒಬ್ಬನೇ ಎಂದೂ, ಅವನು ನಿಸ್ಸಂದಿಗ್ಧವಾಗಿ ಜೈನನೇ ಎಂದೂ ಪ್ರತಿಪಾದಿಸಿದರು. ಗದಾಯುದ್ಧದ ರಚನಾಕಾಲವನ್ನು ಸೂಚಿಸುವ 'ಶಕ ಸಮಗತಿ...' ಎಂಬ ಪದ್ಯವು ಪ್ರಕ್ಷಿಪ್ತವಾದುದೆಂದೂ, ರನ್ನನ ಬೇರೊಂದು ಕಾವ್ಯದ ರಚನಾ ದಿನಾಂಕವನ್ನು (ಕ್ರಿ.ಶ. ೯೮೨) ಅದು ಸೂಚಿಸುತ್ತದೆಂದೂ ಸ್ಪಷ್ಟವಾಗಿ ಮಂಡಿಸಿ, ಅದಕ್ಕೂ ಮುಂದೆ ಎಂದರೆ ಕ್ರಿ.ಶ. ೧೦೦೭ರ ಸುಮಾರಿಗೆ ಗದಾಯುದ್ಧದ ರಚನೆಯಾಗಿರಬೇಕು ಎಂದು ಊಹಿಸಿದರು. ತ್ರಿವೇಣಿ (೧೯೩೬) ಪತ್ರಿಕೆಯ ಕಡೆಗಳಲ್ಲಿ ಪ್ರಕಟವಾದ ಒಂದು ಲೇಖದಲ್ಲಿ ರನ್ನನು ಭಾಸನ ಕೃತಿಗೆ ಎಷ್ಟರ ಮಟ್ಟಿಗೆ ಋಣಿ ಎಂಬುದನ್ನು ವಿವೇಚಿಸಿದ್ದಾರೆ. ಇನ್ನೊಂದು ಕಡೆ

ರನ್ನನ ಅಲಭ್ಯ ಕೃತಿಗಳಾದ ಪರಶುರಾಮಚರಿತ, ಚಕ್ರೇಶ್ವರಚರಿತ ಗಳ ರಚನಾ ತೇದಿಯನ್ನೂ ಮತ್ತಿತರ ಅಂಶಗಳನ್ನೂ ಕೊಟ್ಟಿದ್ದಾರೆ. ಇವೆಲ್ಲ ವಿವರಗಳನ್ನೊಳಗೊಂಡ ಅವರ ಉಪನ್ಯಾಸ ರೂಪೀ ಪ್ರಬಂಧದಲ್ಲಿ, (ಮೂರು ಉಪನ್ಯಾಸಗಳು, ೧೯೪೧) ರನ್ನನ ವ್ಯಕ್ತಿತ್ವದರ್ಶನವೂ ನಮಗೆ ಆಗುತ್ತದೆ. ಮೂವರು ರಾಜರ ಆಶ್ರಯದಲ್ಲಿ ಬಳೆದು ಬಂದು, ಕ್ರಮೇಣ ತನ್ನ ಹಿರಿಮೆಯನ್ನು ಹೆಚ್ಚಿಸಿಕೊಂಡ ಅವನ ಜೀವನಸಾಧನೆಯು ಉತ್ತಮ ಕಾದಂಬರಿಯ ವಸ್ತುವಾಗಬಲ್ಲುದು! ಅದಕ್ಕೆ ಬೇಕಾದ ಸಾಮಗ್ರಿಯು ಈ ಪ್ರಬಂಧದಲ್ಲಿ ಧಾರಾಳವಾಗಿ ದೊರೆಯುತ್ತದೆ.

**ನಾಗಚಂದ್ರ:** ಜೈನಪರಂಪರೆಯಲ್ಲಿ ರಾಮಾಯಣವನ್ನು ಬರೆದ ಈ ಅಭಿನವ ಪಂಪನು, ಕ್ರಿ.ಶ. ೧೦೫೦ರಿಂದ ೧೧೫೦ರ ಅವಧಿಯಲ್ಲಿ ಜೀವಿಸಿದ್ದನೆಂದು ಸ್ಥೂಲವಾಗಿ ನಿರ್ಣಯಿಸಿದ್ದಾರೆ. ಅವನ ಜನ್ಮಸ್ಥಳದ ವಿಚಾರ ಮಾಡುತ್ತ, ಬನವಾಸಿ ದೇಶದ ಪಡುವಣ ಕಡಲತೀರದವನಿರಬೇಕೆಂದು ಹೇಳಿದ್ದಾರೆ. ಅವನ ಕೃತಿಗಳಲ್ಲಿ, ಮಲ್ಲಿನಾಥ ಪುರಾಣವನ್ನು ಕ್ರಿ.ಶ.ಸು. ೧೧೦೦ರಲ್ಲಿಯೂ, ರಾಮಾಯಣವನ್ನು ಹತ್ತು ವರ್ಷಗಳ ಅನಂತರವೂ ಬರೆದಿರಬೇಕೆಂದು ಊಹಿಸಿದ್ದಾರೆ (ಅಭಿನವಪಂಪ, ೧೯೩೨).

**ನಾಗವರ್ಮ(ರು):** 'ನಾಗವರ್ಮರು ಎಷ್ಟು ಮಂದಿ' ಎಂಬುದಾಗಿಯೆ, ಪೈಯವರು ಈ ವಿಷಯಕವಾದ ಪ್ರಬಂಧಕ್ಕೆ (ಪರಿಷತ್ಪತ್ರಿಕೆ, ೧೯೩೩) ಶೀರ್ಷಿಕೆಯನ್ನು ಕೊಟ್ಟಿದ್ದಾರೆ. ಯಾಕೆಂದರೆ ನಾಗವರ್ಮ ಕೃತವೆಂದು ಹೇಳುವ, ಆದರೆ ವಿವಿಧ ಕಾಲಗಳಲ್ಲಿ ರಚಿತವಾದ ಒಟ್ಟು ೬ ಕೃತಿಗಳಿವೆ. ಪೈಯವರು ಈ ಆರೂ ಕೃತಿಗಳ ಕಾಲನಿರ್ಣಯವನ್ನು ಮೊದಲಿಗೆ ಮಾಡಿ, ಆ ಕೃತಿಗಳ ಆಂತರಿಕ ಮತ್ತು ಇತರ ಪ್ರಮಾಣಗಳಿಂದ, ಅವುಗಳ ಕರ್ತೃತ್ವವನ್ನೂ ಆ ಕರ್ತೃತ್ವಗಳ ಮತವನ್ನೂ ಗೊತ್ತುಪಡಿಸಿ, ಒಟ್ಟಿಗೆ ಮೂವರು ನಾಗವರ್ಮರು ಆಗಿಹೋದವರೆಂಬ ನಿರ್ಣಯಕ್ಕೆ ಬಂದಿದ್ದಾರೆ. ಅವರೆಂದರೆ:

ನಾಗವರ್ಮ I (ಬ್ರಾಹ್ಮಣ) (ಕ್ರಿ.ಶ.ಸು. ೯೫೦–೧೦೧೫)
- ಛಂದೋಂಬುಧಿ (ಕ್ರಿ.ಶ. ೯೭೪–೬೭೮)
- ಕರ್ಣಾಟಕ ಕಾದಂಬರಿ (ಕ್ರಿ.ಶ. ೧೦೦೦–೧೦೦೫)

ನಾಗವರ್ಮ II (ಜೈನನು) (ಕ್ರಿ.ಶ.ಸು. ೧೧೨೦–೧೨೦೦)
- ವಸ್ತುಕೋಶ
- ಕಾವ್ಯಾವಲೋಕನ
- ಭಾಷಾಭೂಷಣ

ನಾಗವರ್ಮ III (ಬ್ರಾಹ್ಮಣ) (೧೨ನೇ ಶತಮಾನ)
- ಚಂದ್ರಚೂಡಾಮಣಿ ಶತಕ (ಕ್ರಿ.ಶ.ಸು. ೧೧೦೫–'೨೦)

**ದುರ್ಗಸಿಂಹ:** ಇವನ ಪಂಚತಂತ್ರದ ರಚನಾಕಾಲವು ೪ನೇ ಮಾರ್ಚ್ ೧೦೩೧ ಎಂಬುದು ಪೈಯವರ ನಿರ್ಣಯ (ರಾಷ್ಟ್ರಬಂಧು, ೧೯೩೦).

**ಬ್ರಹ್ಮಶಿವ:** 'ಸಮಯ ಪರೀಕ್ಷೆ'ಯನ್ನು ರಚಿಸಿದ ಇವನ ಜೀವಿತದ ಕಾಲಾವಧಿಯು ಕ್ರಿ.ಶ. ೧೧೫೦–೧೨೦೦ (ರಾಷ್ಟ್ರಬಂಧು, ೧೯೩೫).

**ಹರಿಹರ, ರಾಘವಾಂಕರು:** ಇವರಿಬ್ಬರ ಜೀವನ ಕಾಲಾವಧಿಗಳನ್ನು ಒಂದೇ ಲೇಖದಲ್ಲಿ ವಿವೇಚಿಸಲಾಗಿದೆ. ಆ ಪ್ರಕಾರ ಹರಿಹರನ ಜನನವು ಕ್ರಿ.ಶ.ಸು. ೧೧೪೫. ಗಿರಿಜಾಕಲ್ಯಾಣ ರಚನೆ: ೧೧೭೫–'೮೦. ಹಂಪೆಯಲ್ಲಿ ಶಿವೈಕ್ಯನಾದುದು. ಕ್ರಿ.ಶ.ಸು. ೧೨೩೦–'೩೫. ರಾಘವಾಂಕನ ಹುಟ್ಟು ಕ್ರಿ.ಸ.ಶು. ೧೧೬೦. ಹರಿಶ್ಚಂದ್ರ ಕಾವ್ಯದ ರಚನೆ, ಸು. ೧೧೯೦. ಬೇಲೂರಲ್ಲಿ ಶಿವೈಕ್ಯನಾದುದು. ಸು. ೧೨೧೦ (ಪ್ರಭಾತ, ೧೯೩೭).

**ಕುಮಾರವ್ಯಾಸ:** 'ಕುಮಾರವ್ಯಾಸನ ವಿಚಾರದಲ್ಲಿ, ಅವನ ಮತವನ್ನು ಚರ್ಚೆಗೆ ತೆಗೆದುಕೊಂಡು, ಅವನು ಮಾಧ್ವನೂ ಅಲ್ಲ, ಶಾಂಕರಮತದವನೂ ಅಲ್ಲ: ಭಾಗವತ ಪಂಥದ ಅದ್ವೈತಿ

ಎಂಬ ಹೊಸ ವಿಚಾರವನ್ನು ಮಂಡಿಸಿದ್ದಾರೆ (ಸುಬೋಧ. ೧೯೩೩).

ಶುಷ್ಕವೆಂದೆನಿಸುವ ಕಾಲ, ಮತ ನಿರ್ಣಯಗಳ ಶಾಸ್ತ್ರೀಯ ವಿವೇಚನೆಯಲ್ಲಿಯೇ ಪೈಯವರು ತೊಡಗಿದ್ದರೆನ್ನಲಾಗದು. ಕುಮಾರವ್ಯಾಸ ಭಾರತದ ಕರ್ಣ, ಅರ್ಜುನ, ಭೀಮ, ದುರ್ಯೋಧನ ಈ ನಾಲ್ಕು ಪಾತ್ರಗಳ ರಸವಿಮರ್ಶೆಯನ್ನು ಮಾಡಿದುದೂ ಒಂದು ವಿಶೇಷ ಸಂಗತಿಯಾಗಿದೆ. ಇವನ್ನು ೧೯೪೪-೪೫ರ ಒಂದೆ ವರ್ಷದ ಅವಧಿಯಲ್ಲಿ ಬರೆದು, ಪ್ರಭಾತ, ಕರ್ಮವೀರ, ಜಯಂತಿ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಈ ಪಾತ್ರವಿಮರ್ಶೆಯಲ್ಲಿ ಸ್ಥಾಲೀಪುಲಕ ನ್ಯಾಯವನ್ನು 'ಅಗುಳು ಹಿಚುಕಿ ಅನ್ನ ನೋಡುವ ಕ್ರಮವನ್ನು ತಾವು ಅನುಸರಿಸಿದ್ದೇವೆಂದು ಪೈಯವರು ಹೇಳಿದ್ದಾರೆ. ತುಲನೆಗಾಗಿ ಪಂಪ ಮತ್ತು ಲಕ್ಷ್ಮೀಶರ ಪಾತ್ರ ಸೃಷ್ಟಿಯನ್ನೂ ಬಳಸಿಕೊಂಡಿದ್ದಾರೆ.

ಮೊದಲಿಗೆ ಕರ್ಣ. ಪಂಪ ಮತ್ತು ಕುಮಾರವ್ಯಾಸರು ಕರ್ಣನಿಗೆ ಇತ್ತ ವಿಶೇಷ ಪ್ರಾಶಸ್ತ್ಯವನ್ನು ಪ್ರಸ್ತಾಪಿಸಿರುವರಾದರೂ, ದ್ರೌಪದಿಯ ಸೀರೆಯನ್ನು ಸೆಳೆಯುವಾಗ ಮತ್ತು ಅಶ್ವತ್ಥಾಮನಿಗೆ ವೀರ ಪಟ್ಟವನ್ನು ಕಟ್ಟುವ ಪ್ರಸಂಗದಲ್ಲಿ ಅವನು ಆಡಿದ ಮಾತುಗಳು ಉಚಿತವಲ್ಲ ಎಂದಿದ್ದಾರೆ (ಜಯಂತಿ, ೧೯೪೫). ಅರ್ಜುನನೊಂದಿಗೆ ಅವನನ್ನು ಹೋಲಿಸುತ್ತ, ಅರ್ಜುನನಿಗೆ ದೈವವು ತಾನಾಗಿ ನೆರವಾಯಿತು: ಈತನಿಗೋ ದೈವಬಲವೆ ಇದ್ದಿಲ್ಲ ಎಂದು ಅನುತಾಪವನ್ನು ವ್ಯಕ್ತಪಡಿಸಿದ್ದಾರೆ (ಕರ್ಮವೀರ, ೧೯೪೫). ಭೀಮಸೇನನು ಮಹಾ ಪರಾಕ್ರಮಿಯಾದರೂ, ಕನ್ನಡ ಕವಿಗಳು (ರನ್ನನನ್ನುಳಿದು) ಅವನನ್ನು ಮಹಾನಾಯಕತ್ವಕ್ಕೆ ಏಕೆ ಏರಿಸಲಿಲ್ಲ? ಎಂದು ಪ್ರಶ್ನೆ ಹಾಕಿಕೊಂಡು, ಅವನ ಬಾಹುಬಲಕ್ಕೆ ತಕ್ಕ ಮೇಧಾಬಲವಿಲ್ಲದಿದ್ದುದೆ ಕಾರಣವೆಂದು ಉತ್ತರ ಹೇಳಿದ್ದಾರೆ. ಮತ್ತು ದುಶ್ಶಾಸನ-ದುರ್ಯೋಧನರ ವಧೆಯ ವಿಷಯದಲ್ಲಿ ಅವನದು ಪಾಶವೀ ವೃತ್ತಿಯೆಂದೆನಿಸಿದರೂ, ಅದು ಅವನ ವೈರಿಗಳ ಪಾಶವೀ ವೃತ್ತಿಗೆ ಅನುಗುಣವಾಗೇ ಇದೆ ಎಂದು ಸಮರ್ಥನೆ ಮಾಡಿದ್ದಾರೆ (ಕರ್ಮವೀರ, ೧೯೪೪). ಕೊನೆಯದಾಗಿ

ದುರ್ಯೋಧನನು. ಪೈಯವರು ಉಳಿದ ಕೆಲ ಬರಹಗಾರರಂತೆ, ಅನವಶ್ಯಕವಾಗಿ ಅವನನ್ನು ಧೀರ ನಾಯಕ ಸ್ಥಾನಕ್ಕೆ ಒಯ್ದಿಲ್ಲ. ಅವರ ದೃಷ್ಟಿಯಲ್ಲಿ ಅವನು ಖಳನಾಯಕನೇ: ಯುದ್ಧವೆಂಬ ವಿಷವೃಕ್ಷಕ್ಕೆ ಅವನೇ ತಾಯಿಬೇರು. ಅವರೂ ಒಟ್ಟಿನ ದುರ್ಯೋಧನ ಪಾತ್ರವಿಮರ್ಶೆಯಲ್ಲಿ, ಸಹೃದಯತೆಯು ಇಲ್ಲದಿಲ್ಲ. (ಪ್ರಭಾತ, ೧೯೪೯). ಸ್ವಯಂ ಕವಿಗಳಾದ ಪೈಯವರು ಕಾವ್ಯರಸವನ್ನು ಚೆನ್ನಾಗಿ ಉಂಡಬಲ್ಲರು. ಮತ್ತು ಇತರರಿಗೆ ರುಚಿಯಾಗಿ ಅದನ್ನು ಉಣಿಸಬಲ್ಲರು ಎಂಬುದಕ್ಕೆ ಈ ನಾಲ್ಕೂ ಪ್ರಬಂಧಗಳು ಸಾಕ್ಷಿಯಾಗಿವೆ. ಈ ಪ್ರಬಂಧಗಳಲ್ಲಿಯ ರಸದೃಷ್ಟಿ, ಸಮತೂಕ ಮತ್ತು ಸಹೃದಯತೆಗಳು ಮನನೀಯವಾಗಿವೆ. ಅವರ ಗದ್ಯ ಬರವಣಿಗೆಯಲ್ಲಂತೂ ಸರಿಯೇ. ಕನ್ನಡ ಕಾವ್ಯವಿಮರ್ಶನ ಪದ್ಧತಿಯಲ್ಲಿಯೂ ಈ ಪ್ರಬಂಧಗಳು ಹೊಸ ಹಾದಿಯನ್ನು ತುಳಿದಿವೆ. ಈ ರೀತಿಯಾದ ಕೃತಿಗಳ ರಸವಿಮರ್ಶೆಯನ್ನು ಮಾಡಲು ಅವರು ಅತ್ಯಂತ ಸಮರ್ಥರಿದ್ದರೂ ಇಂಥ ಪ್ರಬಂಧಗಳನ್ನು ಇನ್ನೂ ಅಷ್ಟು ಬರೆಯದೇ ಉಳಿದರಲ್ಲ ಎಂದು ವಿಷಾದಪಡಬೇಕಾಗಿದೆ.

ಹೀಗೆಯೇ ಅಪೂರ್ವವಾದ ಇನ್ನೊಂದು ಪ್ರಬಂಧವೆಂದರೆ ಷಟ್ಪದಿಗಳನ್ನು ಕುರಿತದ್ದು. ಛಂದಶ್ಶಾಸ್ತ್ರವನ್ನು ಕರತಲಾಮಲಕವಾಗಿ ಮಾಡಿಕೊಂಡಿದ್ದರೂ, ಆ ಬಗ್ಗೆ ಅವರು ಬರೆದ ಲೇಖವೆಂದರೆ ಇದೊಂದೇ. ಇದರಲ್ಲಿ, ಷಟ್ಪದಿಗಳ ಮೂಲ, ಅದರ ಪ್ರಕಾರಗಳು, ಕನ್ನಡ ಕವಿಗಳು ಅದನ್ನು ಬಳಸಿಕೊಂಡ ಬಗ್ಗೆ ಇವುಗಳ ಅಮೂಲಾಗ್ರ ವಿವೇಚನೆಯು ಲೇಖನಾವಳಿಯು ಹೊರಬಂದಿತು (ಜಯಕರ್ನಾಟಕ, ೧೯೩೦-'೩೨).

**ಲಕ್ಷ್ಮೀಶ:** ಲಕ್ಷ್ಮೀಶನ ಕಾಲವೂ ವಾದಗ್ರಸ್ತ ವಿಷಯವೇ. ಅವನು ೧೬ನೆಯ ಶತಮಾನದವನೆಂಬುದು ಪೈಯವರ ನಿಶ್ಚಿತ ನಿಲುವೆಯಾಗಿದೆ. ಅವನ ನಿವಾಸಸ್ಥಾನ ಹಾಗೂ ಮತ ಇವುಗಳನ್ನೂ ಪರಿಶೋಧಿಸುತ್ತ, ಪೈಯವರು ಅವನು ಕಡೂರ ಜಿಲ್ಲೆಯಲ್ಲಿರುವ ದೇವನೂರಿನವನು: ಹೈದ್ರಾಬಾದ್ ಸೀಮೆಯ ದೇವ

ನೂರವನಲ್ಲವೆಂದೂ ಅವನು ಹರಿಹರರ ಸಮಾನತೆಯನ್ನು ಪ್ರಸ್ಥಿಸುವ ಭಾಗವತ ಸಂಪ್ರದಾಯದವನೆಂದೂ ಹೇಳಿದ್ದಾರೆ (ಕವಿ ಲಕ್ಷ್ಮೀಶ, ೧೯೩೩).

**ಶಿಶುಮಾಯಣ:** 'ತ್ರಿಪುರದಹನ ಸಾಂಗತ್ಯ'ದ ಕವಿಯಾದ ಶಿಶುಮಾಯಣನ ಕಾಲವನ್ನು ಕುರಿತು, ಈ ಮುನ್ನಿನ ವಿದ್ವಾಂಸರು ಮಂಡಿಸಿದ ವಿಧಾನಗಳನ್ನು ಅಲ್ಲಗಳೆದು ಅವನ ಸಾಂಗತ್ಯದ ರಚನಾಕಾಲವು ೩೧ ಡಿಸೆಂಬರ್ ೧೪೭೨ ಎಂದಿದ್ದಾರೆ (ಸ್ವದೇಶಾಭಿಮಾನಿ, ೧೯೩೧).

**ಸೋಮರಾಜ:** ಪೈಯವರ ಪ್ರಕಾರ ಅವನು ಹಂಪೆಯ ನಾಡಿನವನು (ಕಡಲ ತೀರದವನಲ್ಲ) ಮತ್ತು ಅವನ ಕೃತಿಯಾದ ಉದ್ಭಟ ಕಾವ್ಯವು ಕ್ರಿ.ಶ. ೧೫೨೨ರಂದು ರಚಿತವಾಯಿತು (ಪರಿಷತ್ಪತ್ರಿಕೆ, ೧೯೨೭).

**ರತ್ನಾಕರವರ್ಣಿ:** ಭರತೇಶ ವೈಭವದಲ್ಲಿ ಬಂದ, ವಿದೇಶೀ ಶಬ್ದಗಳನ್ನೂ ಇತರ ಪುರಾವೆಗಳನ್ನೂ ಗಮನಿಸಿ, ಅವನು ೧೬ನೇ ಶತಮಾನದವನೆಂದು ಗೊತ್ತುಪಡಿಸಿದ್ದಾರೆ. ಭರತೇಶವೈಭವವು ೧೫೩೦-'೩೫ರ ಅವಧಿಯಲ್ಲಿ ರಚಿತವಾಗಿರಬೇಕು ಎಂದು ಅವರ ಊಹೆ (ವಿವೇಕಾಭ್ಯುದಯ, ೧೯೫೨).

**ಪಾರ್ತಿಸುಬ್ಬ:** ವಾದವಿವಾದದ ಸುಳಿಯಲ್ಲಿ ಸಿಕ್ಕ ಈ ಯಕ್ಷಗಾನ ಕವಿಯ ವಿಚಾರವಾಗಿ ಗೋವಿಂದ ಪೈ ಅವರ ನಿಲುವೆಯು ಬೆಟ್ಟದಂತೆ ಅಚಲವಾದುದು. ಅವನ ಹುಟ್ಟೂರು ಕುಂಬಳೆಯ ಹತ್ತಿರದ ಅಜಾವರ; ಜನಿಸಿದುದು ಕ್ರಿ.ಶ. ೧೭೩೦ರಿಂದ ೧೭೫೦ರ ಒಳಗಣ ಅವಧಿಯಲ್ಲಿ: ಮರಣ ೧೮೦೧-೦೨. ರಾಮಾಯಣ ಕಥಾನಕವುಳ್ಳ ಎಂಟು ಯಕ್ಷಗಾನ ಪ್ರಸಂಗಗಳು ನಿಶ್ಚಿತವಾಗಿ ಅವನವೇ—ಎಂಬ ವಿಚಾರವನ್ನೊಳಗೊಂಡ ಅವರ ಲೇಖವು ಹಲವು ಸಲ ಪುನರ್ಮುದ್ರಣಗೊಂಡಿದೆ.

**ಮುದ್ದಣ:** ಇಂಥದೇ ಖಚಿತ ವಿವರಣೆಯುಳ್ಳ ಲೇಖವೆಂದರೆ ಮುದ್ದಣನನ್ನು ಕುರಿತದ್ದು. ಮುದ್ದಣ ಕವಿಯ ಜೀವನದ ಮುಖ್ಯ ಸಂಗತಿಗಳು, ಕೃತಿಗಳ ರಚನೆ, ಅವುಗಳ ಪ್ರಕಟನಾ ಕಾಲ—

ಇವನ್ನು ಸಂಕ್ಷೇಪವಾಗಿ ಹಾಗೂ ನಿಸ್ಸಂದಿಗ್ಧ ರೀತಿಯಲ್ಲಿ ಹೇಳಿದ್ದಾರೆ. ಮುದ್ದಣನನ್ನು ಕುರಿತ ಈ ಅದ್ಭುತ ಲೇಖವು ಕೂಡ ಅನೇಕ ಬಾರಿ ಮುದ್ರಣಗಳನ್ನು ಕಂಡಿವೆ.

ಹೀಗೆ, ಕನ್ನಡ ಸಾಹಿತ್ಯದ ಪ್ರಾಚೀನತೆಯ ಅಂಶಗಳನ್ನು ವಿಶದಪಡಿಸಿ. ಅನೇಕ ಜನ ಪ್ರಮುಖ ಕವಿಗಳ ಜೀವನಚರಿತ್ರೆಯನ್ನು ಕೊಟ್ಟು ಕಾಲ, ಮತಾದಿಗಳ ನಿರ್ಣಯ ಮಾಡಿದ್ದಾರೆ. ಅವರು ಮಂಡಿಸಿದ ನಿರ್ಣಯಗಳೆಲ್ಲವೂ ವಿದ್ವಾಂಸರಿಗೆ ಒಪ್ಪಿತವಾಗಿರದಿದ್ದರೂ. ಆ ನಿರ್ಣಾಯಗಳನ್ನು ಅನ್ಯ ವಿದ್ವಾಂಸರು ಸಮರ್ಥ ರೀತಿಯಲ್ಲಿ ಖಂಡಿಸಿ. ಬೇರೆ ಕಾಲಾವಧಿಗಳನ್ನು ಸಾಧಾರವಾಗಿ ಮಂಡಿಸಿದಂಥ ಲೇಖನಗಳು ತೀರ ವಿರಳವಾಗಿವೆ.

## ಹೊಸಗನ್ನಡ

ಹೊಸಗನ್ನಡ ಕ್ಷೇತ್ರದಲ್ಲಿ ಪೈಯವರು ಕೆಲವು ಸಾಹಿತ್ಯ ಪ್ರಕಾರಗಳ ಆರಂಭದ ಕೃತಿಗಳನ್ನು ಹುಡುಕಿ ಹೇಳಿದ್ದಾರೆ. ಮೊತ್ತ ಮೊದಲಿನ ಸಣ್ಣ ಕತೆಯನ್ನು ಯಾರು ಬರೆದರು? ಮೊದಲ ಕಾದಂಬರಿಯ ಹೆಸರೇನು ಎಂಬ ಅಂಶಗಳಿಗೆ ವಿವರಗಳನ್ನು ಪೂರೈಸಿದ್ದಾರೆ. ಇವು ಇತ್ತೀಚಿನ ಸಂಗತಿಗಳೇ ಎಂದು ಕಂಡರೂ ಸಂಶೋಧನೆಯ ಅಗತ್ಯವಿದ್ದಿತು. ಹೊಸ ಸಾಹಿತ್ಯ ಪ್ರಕಾರಗಳ ಅದ್ಯತನದ ಈ ಕೆಳಗಿನ ಪಟ್ಟಿಯು ಪ್ರಯೋಜನಕಾರಿಯಾದೀತೆಂದು ಭಾವಿಸಿದ್ದೇವೆ:

| ಸಾಹಿತ್ಯ ಪ್ರಕಾರ | ಲೇಖಕ | ಕೃತಿಯ ಹೆಸರು | ಕಾಲ |
|---|---|---|---|
| ಸಣ್ಣಕತೆ | ಪಂಜೆ ಮಂಗೇಶ ರಾಯರು | — | ೧೯೦೦ |
| ಶಿಶು ಸಾಹಿತ್ಯ | ,, | — | ೧೯೦೦ |
| ಕಾದಂಬರಿ | ರೆಂಟ್ಲಿ ಸುಬ್ಬರಾವ | ಕೇಸರೀ ವಿಲಾಸ | ೧೮೯೫ |
| ಪ್ರಬಂಧ | ಮುದ್ದಣ | ಜೋಗುಳ | ೧೯೦೦ |

ಹೊಸಗನ್ನಡದ ಮೊದಲ ತಲೆಮಾರಿನ ಕೆಲವು ಹಿರಿಯರು ತೀರಿಕೊಂಡಾಗ ಪೈಯವರು ಅವರ ಸ್ಮೃತಿ ಚಿತ್ರಗಳನ್ನು ಬರೆದಿದ್ದಾರೆ. ದಿವಂಗತರಾದ ಎಫ್. ಕಿಟೆಲ್, ಎಂ. ಎನ್. ಕಾಮತ, ಪಂಜೆಯವರು, ಎನ್. ಎಸ್. ಕಿಲ್ಲೆ, ಬಿ. ಎಂ. ಶ್ರೀಕಂಠಯ್ಯ ಮತ್ತು ಎಂ. ಆರ್. ಶ್ರೀನಿವಾಸಮೂರ್ತಿ—ಇವರನ್ನು ಕುರಿತ ಇಂಥ ಪ್ರಬಂಧಗಳಲ್ಲಿ ಕನ್ನಡ ಸಾಹಿತ್ಯಕ್ಕೆ ಆ ವ್ಯಕ್ತಿಗಳು ನೀಡಿದ ಕಾಣಿಕೆಯ ಸ್ಪಷ್ಟ ನಿರ್ದೇಶವಿದೆ. ಜೊತೆಗೆ ಅವರಲ್ಲಿ ಕೆಲವರೊಂದಿಗೆ ಇದ್ದ ಪೈಯವರ ಆತ್ಮೀಯ ಸಂಬಂಧದ ನಿರೂಪಣೆಯೂ ಇದೆ.

ಗೋವಿಂದ ಪೈ ಅವರ ಇತರ ಗದ್ಯ ಬರವಣಿಗೆಯಲ್ಲಿ ಎರಡು ಆತ್ಮಗತ ಪ್ರಬಂಧಗಳಾಗಿವೆ. ಒಂದು ಮಿಂಚಿನ ಬಳ್ಳಿಯ 'ಕನ್ನಡ ಸಾಹಿತ್ಯಜ್ಞರ ಆತ್ಮಕಥನ' ಪುಸ್ತಕಕ್ಕಾಗಿ ಬರೆದುದು (ದೀವಿಗೆಯಲ್ಲಿ ಪುನರ್ಮುದ್ರಿತ). ಪೈಯವರ ವಾಙ್ಮಯ ಸೃಷ್ಟಿಯ ಹಿನ್ನಲೆಯನ್ನು ತಿಳಿಯುವುದಕ್ಕೆ ಇದು ಕೈಗನ್ನಡಿಯಂತಿದೆ. ಪ್ರಾಸ ಬಿಟ್ಟು ಕವಿತೆ ಬರೆಯತೊಡಗಿದುದರ ಬಗೆಯನ್ನೂ, ಸಂಶೋಧನೆ ಮತ್ತು ಕಾವ್ಯರಚನೆ—ಈ ಎರಡು ಅತಿ ಭಿನ್ನ ಸ್ವರೂಪದ ಕ್ಷೇತ್ರಗಳಲ್ಲಿ ಅವರು ಸಮಾನವಾಗಿ ಕೃಷಿ ಮಾಡಿದುದರ ಹಿನ್ನೆಲೆಯನ್ನೂ, ಈ ಲೇಖಕನಿಂದ ತಿಳಿಯಬಲ್ಲೆವು. ಇನ್ನೊಂದು ಆತ್ಮಗತವಾದ ಪ್ರಬಂಧವೆಂದರೆ 'ಬರೆಹಗಾರನ ಹಣೆಬರಹ'ವೆಂಬುದು (ಮುತ್ತು ಹವಳ). ಅದು ಪೈಯವರ ಏಕಮೇವ ಲಲಿತಪ್ರಬಂಧವಾಗಿದೆ. ಅದರಲ್ಲಿ ಉಕ್ತವಾದಂತಹ ಅನ್ಯ ಅನುಭವಗಳನ್ನು, ಅವರೊಡನೆಯ ಸಂಭಾಷಣೆಯಲ್ಲಿ ಅನೇಕರು ಕೇಳಿದ್ದಾರೆ. ಸರಸ ಹಾಸ್ಯವು ಪೈ ಅವರ ಪ್ರವೃತ್ತಿಗೆ ಸಹಜವಾದುದೇ. ಇಂಥ ಲಲಿತ ಲೇಖನಗಳನ್ನು ಇನ್ನೂ ಅಷ್ಟು ಅವರು ಬರೆದಿದ್ದರೆ ಅಥವಾ ಯಾರಾದರೂ ಬರೆಯಿಸಿದ್ದರೆ ಎಷ್ಟು ನೆಟ್ಟಗಿತ್ತು ಎಂದು ಅನಿಸುವಂತಿದೆ.

ಪೈಯವರ ಇನ್ನುಳಿದ ಗದ್ಯ ಬರವಣಿಗೆಯೆಂದರೆ ಅವರು ಬರೆದ ಮುನ್ನುಡಿಗಳು, ಪುಸ್ತಕ ವಿಮರ್ಶೆಗಳು, ಹಾಗೂ ಅವರ

ಸಾಹಿತ್ಯಿಕ ಪತ್ರಗಳು. ಮುನ್ನುಡಿ ಮತ್ತು ಪುಸ್ತಕ ವಿಮರ್ಶೆಗಳು ಕೆಲವು ಮಾತ್ರವೇ ಇವೆ. ಪುಸ್ತಕ ವಿಮರ್ಶೆಗಳು ಹೆಚ್ಚಾಗಿ ಇತಿಹಾಸಕ್ಕೆ ಸಂಬಂಧಪಟ್ಟವುಗಳೇ ಆಗಿವೆ. ಮುನ್ನುಡಿಯಲ್ಲಿ ವಿಶೇಷವಾಗಿ ಹೆಸರಿಸಬೇಕಾದುದೆಂದರೆ. ರಾಜರತ್ನಂರ 'ಮಹಾಕವಿ ಪುರುಷಸರಸ್ವತಿ'ಗೆ ಬರೆದದ್ದು. ಅದರಲ್ಲಿ ವಿಡಂಬನ ಸಾಹಿತ್ಯ ವನ್ನು ಕುರಿತು ಕೆಲವು ಮಹತ್ವದ ಮಾತುಗಳಿವೆ. ಇನ್ನಿತರ ಅನೇಕಾನೇಕ ಮುನ್ನುಡಿಗಳು ಶುದ್ಧಾಂಗವಾಗಿ ಹಾರೈಕೆಯ ರೂಪ ದಲ್ಲಿವೆ.

ಸಾಹಿತ್ಯಿಕ ಪತ್ರಗಳೆಂದರೆ ಕೆಲವು ತರುಣ ಲೇಖಕರು ತಮ್ಮ ಕೃತಿಗಳಿಗೆ ಪೈ ಅವರ ಅಭಿಪ್ರಾಯ–ಆಶೀರ್ವಾದಗಳನ್ನು ಕೋರಿ ದಾಗ ಬರೆದ ಉತ್ತರವು. ಒಂದು ಪುಸ್ತಕ ಎಷ್ಟೇ 'ಸಾದಾ' ಮತ್ತು ದೋಷಪೂರಿತವಾಗಿರಲಿ, ಪೈಯವರು ಅದರ ಬಗ್ಗೆ ಅಭಿಪ್ರಾಯ ಕೊಡುವಾಗ ಅದನ್ನು ಎಂದೂ ನಿಕೃಷ್ಟವೆಂದು ಭಾವಿಸುತ್ತಿದ್ದಿಲ್ಲ. ಆ ಕೃತಿಯ ಹಿಂದೆ ಇರುವ ಲೇಖಕನ ಪ್ರೇರಣೆ–ಸದ್ಭಾವಗಳನ್ನೂ ಇತರ ಒಳ್ಳೆಯ ಅಂಶಗಳನ್ನೂ ಸಹೃದಯತೆಯಿಂದ. ಬಿಚ್ಚುಮಾತಿನಲ್ಲಿ ಎತ್ತಿ ತೋರಿಸುತ್ತಿದ್ದರು. ಅನಂತರ ಆ ಕೃತಿಯಲ್ಲಿಯ ಭಾಷಾದೋಷಗಳನ್ನು ತೋರಿಸಿ ಕೊಟ್ಟು ಭಾಷಾ ಶುದ್ಧಿಯತ್ತ ಆ ಲೇಖಕನ ಗಮನವನ್ನು ಸೆಳೆಯು ತ್ತಿದ್ದರು. ಕೊನೆಯಲ್ಲಿ ಶ್ರೀ ದೇವರ ಕೃಪೆಯ ಆವಾಹನೆ! ಪೈಯವರ ಈ ಕ್ರಮವು ಕಿರಿಯ ಲೇಖಕರನ್ನು ಮುಂದೆ ತರುವಲ್ಲಿ ತುಂಬಾ ಸಹಾಯಕಾರಿಯಾಗಿದ್ದಿತು.

## ೪. ಸಂಶೋಧನಾಕ್ರಮ

ಉಚ್ಚಮಟ್ಟದ ಮಾನಸರಲ್ಲಿ ಸತ್ಯಾನ್ವೇಷಣೆಯು ಒಂದು ಸಹಜ ಪ್ರವೃತ್ತಿಯಾಗಿದೆ. ಅನ್ವೇಷಣೆ ಎಂದರೆ ಯಾವುದೊಂದು ವಿಷಯ ಅಥವಾ ವಿಚಾರದ ಮೂಲವನ್ನು ತಿಳಿಯಬೇಕೆನ್ನುವ ಜಿಜ್ಞಾಸೆ

ಮತ್ತು ಅದಕ್ಕಾಗಿ ಪ್ರಯತ್ನ. ದೈವಿಕತೆಯ ಅನ್ವೇಷಣೆಯಲ್ಲಿ ತೊಡಗಿದವನು ತತ್ವಜ್ಞಾನಿಯೆನಿಸಿಕೊಳ್ಳುತ್ತಾನೆ. ಭೌತಿಕ ವಿಷಯಗಳ ಮೂಲಶೋಧದಲ್ಲಿ ತೊಡಗಿದವನು ವಿಜ್ಞಾನಿಯಾಗುತ್ತಾನೆ. ಗತಕಾಲದಲ್ಲಿ ಏನು ನಡೆಯಿತೆಂಬುದರ ಸತ್ಯಾಂಶವನ್ನು ತಿಳಿಯಬಯಸುವವನು ಇತಿಹಾಸ ಸಂಶೋಧಕನೆನಿಸುತ್ತಾನೆ.

ಇತಿಹಾಸ ಸಂಶೋಧಕರಲ್ಲಿ ಇರಬೇಕಾದ ಮುಖ್ಯ ಗುಣಗಳಾವುವು? ಮೊದಲಲ್ಲಿ ಅವಶ್ಯವಾಗಿ ಇರಬೇಕಾದುದು ವಿದ್ವತ್ತು. ಶೀಘ್ರ ಗ್ರಹಣಶಕ್ತಿ, ವಿವೇಚನಾಸಾಮರ್ಥ್ಯ, ಹರಿತವಾದ ತರ್ಕಸರಣಿ ಮತ್ತು ಸ್ಮರಣಶಕ್ತಿ---ಈ ಜನ್ಮಜಾತ ಪ್ರವೃತ್ತಿಗಳಿಂದಾಗಿ ಅವನ ವ್ಯಾಸಂಗವು ಬೆಳೆಯುತ್ತದೆ. ಹೀಗೆ ಬುದ್ಧಿವಂತಿಕೆ ಮತ್ತು ವ್ಯಾಸಂಗಗಳ ಸಂಗಮದಿಂದ ಮೂರ್ತೀಭವಿಸಿದ ವಿದ್ವತ್ತೇ ಸಂಶೋಧನ ಕಾರ್ಯದ ಪ್ರಥಮ ಸೋಪಾನವಾಗಿದೆ.

## ವಿದ್ವತ್ತು

ಗೋವಿಂದ ಪೈಯವರು ಪ್ರಥಮ ದರ್ಜೆಯ ವಿದ್ವಾಂಸರಾಗಿದ್ದರೆಂಬ ಮಾತು ನಿಸ್ಸಂದಿಗ್ಧವಾದುದು. ಅವರ ಆಸಕ್ತಿಯ ವಿಷಯಗಳಲ್ಲಿ ಮುಖ್ಯವಾದುವುಗಳೆಂದರೆ, ಕಾವ್ಯಗ್ರಂಥಗಳು, ವಿವಿಧ ಧರ್ಮಗಳ ತಾತ್ವಿಕ ಹಾಗೂ ಪುರಾಣಗ್ರಂಥಗಳು, ವ್ಯಾಕರಣ, ಜ್ಯೋತಿಷ ಶಾಸ್ತ್ರಗಳು, ಅಲ್ಲದೆ ಅನೇಕ ನಾಡುನುಡಿಗಳ ಚರಿತ್ರೆ. ಇವುಗಳಲ್ಲಿಯ ಯಾವುದೇ ಅಂಶವನ್ನು ಚೆನ್ನಾಗಿ ಮನನ ಮಾಡಿಕೊಂಡು ಬೇಕಾದ ಸಂದರ್ಭದಲ್ಲಿ ಅಸ್ಖಲಿತವಾಗಿ ವಿವರಿಸುವಷ್ಟು ಅವರು ಪರಿಣತಿಯನ್ನು ಹೊಂದಿದ್ದರು. ಜ್ಯೋತಿಷ ಶಾಸ್ತ್ರದ ಸ್ಕಂಧತ್ರಯಗಳಾದ ಗಣಿತ, ಸಂಹಿತೆ ಮತ್ತು ಹೋರಾ ಇವುಗಳಲ್ಲಿ, ಗಣಿತಜ್ಞಾನವು ರಾಜರ ಹಾಗೂ ಕವಿಗಳ ಕಾಲವನ್ನು ನಿರ್ಣಯಿಸುವುದಕ್ಕೆ ಸಹಾಯಕವಾಗುವಂತಹುದಷ್ಟೆ. ಪೈಯವರು ಇದರಲ್ಲಿ ನಿಸ್ಸೀಮ ಪಾಂಡಿತ್ಯವನ್ನು ಪಡೆದಿದ್ದರಲ್ಲದೆ ಫಲಬೋಧಕಗಳಾದ

ಇನ್ನೆರಡು ಸ್ಕಂಧಗಳನ್ನೂ ಕಲಿತವರೇ ಆಗಿದ್ದರು. ಭಗವದ್ಗೀತೆಯ ವಿಷಯಕ್ಕೆ ಅವರು ಪ್ರತ್ಯೇಕ ಲೇಖನವನ್ನು ಬರೆದಿರದಿದ್ದರೂ ವ್ಯಾಖ್ಯಾನ ಸಹಿತವಾಗಿ ಅದರ ಶ್ಲೋಕಗಳ ಪರಾಮರ್ಶೆಯನ್ನೂ ಮಾಡಬಲ್ಲವರಾಗಿದ್ದರು. ಪೈಯವರಷ್ಟು ಜ್ಞಾನಸಾಧನೆಯುಳ್ಳ ಅನ್ಯ ಭಾರತೀಯ ವಿದ್ವಾಂಸರು ಹಿಂದಿನ ತಲೆಮಾರಿನವರಲ್ಲಿ ಬೆರಳೆಣಿಕೆಯ ಜನ ಮಾತ್ರ ಎನ್ನಬಹುದು.

ಅವರ ಜ್ಞಾನಸಾಧನೆಯ ಸ್ಥೂಲ ಕಲ್ಪನೆ ಬೇಕೆಂದರೆ, ಅವರ ಯಾವುದೇ ಲೇಖನದ ಅಡಿಟಿಪ್ಪಣಿ ರೂಪದ ಆಧಾರ ಗ್ರಂಥಗಳ ಸೂಚಿಯನ್ನು ಪರಿಶೀಲಿಸಬಹುದು. ಬುದ್ಧನ ಪರಿನಿರ್ವಾಣವನ್ನು ಕುರಿತ ಕೇವಲ ೧೨ ಪುಟದ ಇಂಗ್ಲಿಶ್ ಲೇಖನಕ್ಕೆ ೫೫ ವಿವಿಧ ಲೇಖನಗಳ ಆಧಾರ-ಅಡಿಟಿಪ್ಪಣಿಗಳನ್ನು ಕೊಟ್ಟಿದ್ದಾರೆ. ಆದಾಗ್ಯೂ ಅವರು ತಮ್ಮ ವಿದ್ವತ್ತಿನ ಚತುರ್ಥಾಂಶವನ್ನಾದರೂ, ಲೇಖನ ರೂಪದಲ್ಲಿ ಇಳಿಸಿದ್ದಾರೆಯೆ. ಎಂದು ನಮಗೆ ಸಂದೇಹ.

ಪೈಯವರು ತಮ್ಮ ಸಂಶೋಧನ ಕಾರ್ಯದಲ್ಲಿ ದ್ವಿತೀಯ ಭಾವದ (secondary) ಆಕರಗಳನ್ನು ನೇರವಾಗಿ ಸ್ವೀಕರಿಸುತ್ತಿದ್ದಿಲ್ಲ. ಕ್ರಿಸ್ತ ಚರಿತೆಯ ದೃಷ್ಟಿಯಿಂದ ಬೈಬಲಿನ ಹಳೆ, ಹೊಸ ಒಡಂಬಡಿಕೆಗಳನ್ನು ಓದುವಾಗ ಅವುಗಳ ಅಧಿಕೃತ ಇಂಗ್ಲಿಶ್ ಭಾಷಾಂತರದಿಂದ ತೃಪ್ತಿ ಹೊಂದದೇ ಅವುಗಳನ್ನು ಮೂಲದ ಹಿಬ್ರು. ಗ್ರೀಕ್ ಭಾಷೆಯಲ್ಲಿಯೆ ಅಭ್ಯಾಸ ಮಾಡಬೇಕೆನ್ನುವ ಪ್ರವೃತ್ತಿ ಅವರದು. ಇದೇ ಕಾರಣದಿಂದ, ಎಂದರೆ ಮೂಲ ಆಧಾರಗಳನ್ನು ಸ್ವಯಂ ಪರಿಶೀಲಿಸುವ ಬಯಕೆಯಿಂದಾಗಿ, ಅವರು ಅನ್ಯ ಭಾಷೆಗಳನ್ನು ಕಲಿತರು. ಆ ಭಾಷೆಗಳ ವ್ಯವಹಾರಾತ್ಮಕ ಜ್ಞಾನ (working knowledge) ಅಷ್ಟೆ ಹೇಗೆ ನಡೆದೀತು? ಆದ್ದರಿಂದ ಅಂಥ ಭಾಷೆಗಳಲ್ಲಿ ಪರಿಣತಿಯನ್ನೂ ಹೊಂದಿದ್ದರು.

ಸುಮಾರು ೨೦ ಭಾಷೆಗಳಲ್ಲಿಯ ಅವರ ಪರಿಣತಿಯ ಹಿನ್ನೆಲೆಯನ್ನು ಹೀಗೆ ಗುರುತಿಸಬಹುದು. ಕನ್ನಡ, ಕೊಂಕಣಿ. ತುಳು ಮತ್ತು ಇಂಗ್ಲಿಶ್ ಇವು ಎಂತಿದ್ದರೂ ಅವರಿಗೆ ಅವಗತವಾಗಬೇಕಿದ್ದವುಗಳೇ. ನೆರೆಯ ಭಾಷೆಗಳಾದ ಮರಾಠೀ ಮತ್ತು ಮಲೆ

ಯಾಳೀ ಭಾಷೆಗಳ ಪರಿಚಯವೂ ಸಹಜವಾಗಿ ಒದಗಿ ಬಂದುದೇ ಆಗಿದೆ. ಶಾಸನ ಹಾಗೂ ಪುರಾತನ ಕಾವ್ಯ-ಶಾಸ್ತ್ರ ಗ್ರಂಥಗಳ ಅಭ್ಯಾಸದ ಕಾರಣದಿಂದಾಗಿ ಅವರು ಸಂಸ್ಕೃತ, ಪ್ರಾಕೃತ, ಪಾಲೀ, ಅರ್ಧಮಾಗಧೀ ಇವುಗಳನ್ನು ಕಲಿಯಲೇಬೇಕಾಯಿತು. ಉತ್ತರ ಬೌದ್ಧ ಪಂಡಿತರೊಡನೆ ಪಾಲೀ ಭಾಷೆಯಲ್ಲಿ ಪತ್ರವ್ಯವಹಾರ ಮಾಡುವಷ್ಟು ಆ ಭಾಷೆಯಲ್ಲಿ ಪರಿಜ್ಞಾನ ಅವರಿಗಿದ್ದಿತು. ಈ ನಾಲ್ಕೂ ಭಾಷೆಗಳ ವಿಶೇಷ ಪರಿಜ್ಞಾನದಿಂದಾಗಿಯೆ, ಜೈನ, ಬೌದ್ಧ ಧರ್ಮವಿಚಾರದ ಅವರ ಸಂಶೋಧನೆಯು ಸುಗಮವಾಯಿತು. ಹೀಗೆಯೇ ಬೇರೆ ಸಂಶೋಧನ ಲೇಖನಗಳ ಪರಿಶೀಲನೆಯ ದೃಷ್ಟಿಯಿಂದ ಹಿಂದೀ, ಉರ್ದು, ತಮಿಳು, ತೆಲುಗು, ಓರಿಯಾ ಈ ಭಾಷೆಗಳನ್ನು ರೂಢಿಸಿಕೊಂಡಿರಬೇಕು. ಆದರೆ ಭಾರತೀಯ ಭಾಷೆಗಳಲ್ಲಿ ಇವರು ಮೊದಲು ಕಲಿತುದೆಂದರೆ ಬಂಗಾಲಿ. ಕೇಶವಚಂದ್ರ ಸೇನ್, ರವೀಂದ್ರನಾಥ ಠಾಕೂರ ಮುಂತಾದವರ ಬರಹಕ್ಕೆ ಮನಸೋತುದೇ ಇದರ ಕಾರಣವಾಗಿದೆ. ಅವರ ಬರವಣಿಗೆಯ ಆರಂಭಕಾಲದ ಬಂಗಾಲೀ ಅನುವಾದಗಳು ಇದಕ್ಕೆ ಸಾಕ್ಷಿಯಾಗಿವೆ. ಅವರು ಜಾಪಾನೀ ಭಾಷೆಯನ್ನು ಕಲಿಯಲು ಮನಸ್ಸು ಮಾಡಿದುದು 'ನೋ' ನಾಟಕಗಳಿಂದಾಗಿ.

ಕ್ರಿಸ್ತಶಕದ ಒಳಹೊರಗೆ ಭಾರತಕ್ಕೆ ಬಂದ, ಹಾಗೂ ರಾಜ್ಯ ಮಾಳಿದ ವಿದೇಶೀಯರ ಕುರಿತ ಸಂಶೋಧನೆ ಮಾಡುವಾಗ ಅವರು ಗ್ರೀಕ್, ಲ್ಯಾಟಿನ್, ಪರ್ಶಿಯನ್ ಭಾಷೆಗಳನ್ನು ಕಲಿಯಬೇಕಾಗಿ ಬಂತು. ಅವರ ಗ್ರೀಕ್ ಭಾಷೆಯ ಪರಿಣತಿಯ ಫಲವಾಗಿಯೆ, ನಮಗೆ ಒಂದು ಯಃಕಶ್ಚಿತವಾದ ಗ್ರೀಕ್ ಪ್ರಹಸನದಲ್ಲಿ ಹುದುಗಿದ ಪ್ರಾಚೀನ ಕರ್ನಾಟಕದ ಕರಾವಳಿಯ ಪದಸಮೂಹದ ವಿಚಾರವು ಹೊರಪಟ್ಟಿತು. ಪ್ಟೊಲೆಮಿಯು ವಿಚಿತ್ರವಾಗಿ ಉಚ್ಚರಿಸಿದ ಕನ್ನಡ ಊರುಗಳ ರೂಹು ತಿಳಿಯಬಂದು, ಪ್ರಾಚೀನ ಕರ್ನಾಟಕದ ಉತ್ತರ ಭಾಗದ ಭೌಗೋಲಿಕ ರೂಪರೇಷೆಯು ಕೆಲಮಟ್ಟಿಗೆ ಸಿದ್ಧವಾಯಿತು.

ಕುಶಾಗ್ರವಾದ ಬುದ್ಧಿಮತ್ತೆಯಿಂದಲೂ, ಬಹುಭಾಷಾ ಗ್ರಂಥ

ಗಳ ವಾಚನದಿಂದಲೂ ಗ್ರಹಣಮಾಡಿದ ಅಂಶಗಳನ್ನು ಬೇಕೆಂದಾಗ, ಸಂಶೋಧನೆಯ ಕೆಲಸದಲ್ಲಿ ಬಳಸಿಕೊಳ್ಳುತ್ತಿದ್ದ ಪೈಯವರ ವಿವೇಚನಾಶಕ್ತಿಯು ಅದ್ಭುತವಾಗಿದ್ದಿತು. ಅವರ ಮೆದುಳಿನಲ್ಲಿ ವ್ಯವಸ್ಥಿತವಾಗಿ ಅವಿತುಕೊಂಡಿದ್ದ ಅವುಗಳನ್ನು ತಮಗೆ ಬೇಕಾದಷ್ಟರ ಮಟ್ಟಿಗೆ ಹೊರತೆಗೆದು ಅವರು ಲೇಖನದಲ್ಲಿ ಬಳಸುತ್ತಿದ್ದರು.

ರತ್ನಾಕರವರ್ಣಿಯ ಕಾಲವನ್ನು ಗೊತ್ತುಪಡಿಸುವ 'ಮಣಿಶೈಲ ಗತಿಯಿಂದು ಶಾಲಿ ಶಕ ಕಾಲಂ' ಎಂಬೊಂದು ಪದ್ಯವಿದೆ. ಇವುಗಳಲ್ಲಿ ಮಣಿ, ಶೈಲ ಮತ್ತು ಇಂದು ಇವುಗಳ ಸಾಂಕೇತಿಕ ಅಂಕಿಗಳೆಂದರೆ ೯, ೭ ಮತ್ತು ೧ ಎಂಬುದು ನಿಶ್ಚಿತವಾಗಿಯೆ ಇದ್ದಿತು. ಆದರೆ ಗತಿ ಎಂಬುದರ ಅರ್ಥವು ಮೂರೊ, ನಾಲ್ಕೊ ಎಂಬುದು ಸಂದಿಗ್ಧವಿದ್ದಾಗ, ಪೈಯವರು ಆ ಶಬ್ದವು, ೯ರಿಂದ ೧೯ನೇ ಶತಮಾನದ ವರೆಗಿನ ಕನ್ನಡ, ಸಂಸ್ಕೃತ, ಪ್ರಾಕೃತ ಭಾಷಾ ಕಾವ್ಯಗಳಲ್ಲಿ, ಸಾಂಕೇತಿಕವಾಗಿ ಎಲ್ಲೆಲ್ಲಿ ಬಳಸಲ್ಪಟ್ಟಿದೆ ಎಂಬ ಬಗ್ಗೆ ಒಂದರ ಮೇಲೊಂದರಂತೆ ೧೪ ಉದಾಹರಣೆಗಳನ್ನು ಕೊಟ್ಟು, ಅದರ ಅರ್ಥ ೪ ಎಂಬುದಾಗಿ ತೋರಿಸಿಕೊಟ್ಟಿದ್ದಾರೆ. ಪ್ರಾಕೃತ ಕಾವ್ಯ 'ಗೊಮ್ಮಟ ಸಾರ'ದಲ್ಲಿ 'ಗಇತ್ತಿಯ ಹವೇ ಚದುಥಾ' ಎಂದು ಇದೆಯಂತೆ! ಬೇರೊಂದು ಸಂದರ್ಭದಲ್ಲಿ ಪ್ರಾಕೃತ 'ಗತಿ' ಪದವಿಚಾರ ಬಂದಾಗ, ಗೊಮ್ಮಟ ಸಾರದ ಆ ಪದ್ಯ ಚರಣವು ಅವರ ನೆನಪಿನ ಲೋಹಚುಂಬಕದಿಂದ ಸೆಳೆಯಲ್ಪಟ್ಟುದು ನಮ್ಮನ್ನು ಬೆರಗುಗೊಳಿಸುತ್ತದೆ.

ಪೈಯವರ ಸ್ಮರಣಶಕ್ತಿಯು ಅನೇಕರ ಗಮನಕ್ಕೆ ಬಂದುದೇ ಆಗಿದೆ. ಯಾವುದೊಂದು ಗತಕಾಲದ ವಿಚಾರವು, ಅವರೊಡನಾಗುವ ಸಂಭಾಷಣೆಯಲ್ಲಿ ಬಂದರೆ ಸಾಕು, ಅದಕ್ಕೆ ಸಂಬಂಧಿಸಿದ ತಿಥಿ, ವಾರ, ನಕ್ಷತ್ರ, ಮೂಲ ಸಾಮಗ್ರಿಯು ರಚನಾಕಾಲ— ಎಲ್ಲವೂ ಮೇಲ್ಪಾಯ್ದು ಹೊರಬರುತ್ತಿದ್ದುವು. ಈ ನೆನಪಿನ ಶಕ್ತಿಯು ತಮ್ಮ ಮುಪ್ಪಿನ ಕಾಲದಲ್ಲಿ ಕುಂಠಿತವಾಗಿದೆಯೆಂದು ಪೈಯವರು ಹೇಳುತ್ತಿದ್ದರೂ ಕೂಡ ಅವರು 'ಒಮ್ಮೆ ತಲೆ ಚಚ್ಚಿ

ಕೊಂಡರಾಯಿತು". ಆ ಅವರ ವಯಸ್ಸಿನಲ್ಲಿಯೂ ಅವರ ವಿಚಾರ ಮುಂಡನೆಗೆ ನೆರವಾಗುತ್ತಿದ್ದಿತು.

ಹೀಗೆ ಅರಗಿಸಿಕೊಂಡ ಆಧಾರಗಳಿಂದ, ಹೊಸ ಮಾತನ್ನು ರೂಪಿಸಬೇಕಾದರೆ ಸಂಶೋಧಕನಲ್ಲಿ ಪರಿತವಾದ ತರ್ಕಸರಣಿ ಬೇಕು, ಆಧಾರ–ಪ್ರಮಾಣಗಳನ್ನು ಚೆನ್ನಾಗಿ ವಿಶ್ಲೇಷಿಸಿ ಅವ ರಲ್ಲಿಯ ಒಳ ಅರ್ಥವು ಹೀಗೇ ಇರಬೇಕೆಂದು ಹೇಳುವಲ್ಲಿ ತರ್ಕ ಬುದ್ಧಿಯು ತೀಕ್ಷ್ಣವಾಗಿದ್ದರೇನೇ ಸಾಧ್ಯವೆನ್ನಬಹುದು. ಮೇಲೆ ಹೇಳಿದ 'ಗತಿ' ಪದದ ೧೪ ಉದಾಹರಣೆಗಳಲ್ಲಿಯ ಒಂದು ಪದ್ಯ ದಲ್ಲಿ 'ಅಲಸದೆ ನಾಲ್ಕುಂ ಗತಿಯೊಳ್' ಎಂಬ ಮಾತು ಬರುತ್ತದೆ. ಸರಿ, 'ಗತಿ' ಎಂದರೆ ನಾಲ್ಕು ಎಂಬ ಅರ್ಥ ಇಲ್ಲಿಯೂ ಇದೆ ಎಂದು ಹೇಳಿ ಮುಂದೆ ಸಾಗಬಹುದಿತ್ತು. ಆದರೆ ಪೈಯವರ ತರ್ಕಸರಣಿ ಅದಕ್ಕೂ ಮುಂದೆ ಹೋಗಿ ವಿಶೇಷಾರ್ಥವನ್ನು ಅದರಲ್ಲಿ ಕಂಡುಕೊಂಡಿತು. ಆ ವಿಶೇಷಾರ್ಥವು ಹೀಗಿದೆ:

ಈ ಕಂದಪದ್ಯದಲ್ಲಿ 'ನಾಲ್ಕುಂ ಗತಿಯೊಳ್' (—ನಾಲ್ಕೂ ಗತಿಯಲ್ಲಿ) ಎಂದಿರುವಲ್ಲಿ ನಾಲ್ಕರ ಕೊನೆಯ 'ಉಂ' ಎಂಬ ಸಮುಚ್ಚಯ ಪದದಿಂದ ಗತಿಗಳು ನಾಲ್ಕೇ ವಿನಾ ಹೆಚ್ಚೂ ಅಲ್ಲ. ಕಡಿಮೆಯೂ ಅಲ್ಲವೆಂದು ತಿಳಿಯುತ್ತದೆ."

## ಇತಿಹಾಸ ಪ್ರಜ್ಞೆ

ಇತಿಹಾಸ ಸಂಶೋಧಕನಲ್ಲಿ ಇರಬೇಕಾದ ಇನ್ನೊಂದು ಗುಣ ವೆಂದರೆ ಇತಿಹಾಸಪ್ರಜ್ಞೆ. ಎಂದರೆ, ಅವನು ತನ್ನ ಸಂಶೋಧ ನೆಯ ಅಂಶಗಳನ್ನು ಆ ಆ ಕಾಲಮಾನ, ಪರಿಸರ ಪರಿಸ್ಥಿತಿಗಳನ್ನು ಅನುಲಕ್ಷಿಸಿಯೇ ಮಂಡಿಸಬೇಕಾಗುತ್ತದೆ. ಅವನು ಕಂಡುಹಿಡಿದ ವಿಚಾರವು ಅಂದಂದಿನ ಕಾಲ, ದೇಶಗಳಿಗೆ ವ್ಯತಿರಿಕ್ತವಾಗಿ ಇರ ಕೂಡದು. ಇದು ಅಲ್ಲದೆ, ಅಪೂರ್ಣ ಹಾಗೂ ಅಸ್ಪಷ್ಟವೆನಿಸುವ ಆಧಾರ ಸಾಮಗ್ರಿಗಳಿಂದ, ಗತಕಾಲದ ಸಂಗತಿಗಳನ್ನು ಕಂಡು ಹಿಡಿಯುವಲ್ಲಿಯೂ ಈ ಇತಿಹಾಸ ಪ್ರಜ್ಞೆಯು ಅತ್ಯಂತ ಜಾಗ್ರತ

ವಾಗಿರಬೇಕಾಗುತ್ತದೆ. ಫೆರಿಷ್ತಾನ ಬಹಾಮನೀ ರಾಜ್ಯವೃತ್ತಾಂತ ವಿರಲಾಗಲೀ, ಕನ್ನಡ ಕವಿಗಳ ಕುರಿತ ದೇವಚಂದ್ರನ ರಾಜಾವಳೀ ಕಥೆಯನ್ನಾಗಲೀ ಯಾವ ಚರಿತ್ರಕಾರನೂ ನೇರವಾಗಿ ಸ್ವೀಕರಿಸ ಲಾರನಷ್ಟು, ಸತ್ಯವಲ್ಲದ ಸಂಗತಿಗಳನ್ನು ಅವು ಒಳಗೊಂಡಿವೆ. ಇದಕ್ಕೆ ವಿರುದ್ಧವಾಗಿ ಪೌರಾಣಿಕ ಕಥೆ ಹಾಗೂ ಜನಪದ ಐತಿಹ್ಯ ಗಳಲ್ಲಿಯೂ ಅನೇಕ ಕಾಲ್ಪನಿಕ ಸಂಗತಿಗಳೇ ಇದ್ದರೂ ಕೂಡ, ಅವುಗಳಲ್ಲಿಯೂ ಇತಿಹಾಸದ ಅಂಶಗಳು ಹುದುಗಿಕೊಂಡಿರು ತ್ತವೆ. ಆದರೆ, ಉಸುಕಿನಿಂದ ಬಂಗಾರದ ಕಣಗಳನ್ನು ಆಯ್ದು ತೆಗೆಯುವಂತೆ ಇಂಥವುಗಳಿಂದ ಐತಿಹಾಸಿಕ ಅಂಶಗಳನ್ನು ಹೆಕ್ಕಿ ತೆಗೆಯುವುದಕ್ಕೂ ವಿಶಿಷ್ಟವಾದ ಇತಿಹಾಸಪ್ರಜ್ಞೆಯು ಬೇಕು.

ಪೈಯವರಲ್ಲಿ ಈ ಇತಿಹಾಸಪ್ರಜ್ಞೆಯು ಜ್ವಲಂತವಾಗಿ ಇತ್ತೆನ್ನುವುದಕ್ಕೆ ಅವರ ಪ್ರತಿಯೊಂದು ಬರಹವೂ ನಿದರ್ಶನ ವಾಗಿದೆ. ಪುರಾಣ, ಐತಿಹ್ಯಗಳಂತಹ ಅಸ್ಪಷ್ಟ ಹಾಗೂ ಕ್ಲಿಷ್ಟವಾದ ಆಕರಗಳಲ್ಲಿಯೂ ಇತಿಹಾಸದ ಅಂಶಗಳನ್ನು ಕಾಣುವ ಅಂಜನ ವೃಷ್ಟಿ ಅವರಿಗಿದ್ದಿತು. ಕಥಾಸರಿತ್ಸಾಗರದಲ್ಲಿ ಬರುವ ನಾಗರು, ಗರುಡರಲ್ಲಿಯ ಸಂಘರ್ಷಣೆ ಪಕ್ಷಿ–ಪ್ರಾಣಿಗಳದಲ್ಲ; ಎರಡು ಜನಾಂಗದ್ದು; ಮತ್ತು ಈ ನಾಗ, ಗರುಡ ಲಾಂಛನವುಳ್ಳವರು ಇಂಥದೇ ಪ್ರದೇಶದಲ್ಲಿ ವಾಸವಾಗಿದ್ದವರು ಎಂದು ಹೇಳಿದ (ಹೈಗ. ಹೈವ ಲೇಖನದಲ್ಲಿ) ಅವರ ವಿವರಣೆಯನ್ನು ಇದಕ್ಕೆ ಉದಾಹರಣೆಯೆಂದು ತಿಳಿಯಬಹುದು.

ಇತಿಹಾಸ ಸಂಶೋಧನೆಯಲ್ಲಿ ಅಗತ್ಯವಾಗಿ ಬೇಕಾದ ಮತ್ತೊಂದು ಗುಣವೆಂದರೆ ವಸ್ತುನಿಷ್ಠತೆ (objectivity). ನಮ್ಮ ನಾಡು, ನಮ್ಮ ಜನ, ನಮ್ಮ ಮತ ಅಥವಾ ನಮಗೆ ಆಗದವರು— ಎಂಬ ಸ್ವನಿಷ್ಠ ಅಂಶಗಳ ಪ್ರಭಾವವು ಮೇಲಾಗಿ, ಸಂಶೋಧಕನು ವಸ್ತುನಿಷ್ಠತೆಯನ್ನು ಕಳೆದುಕೊಳ್ಳುವ ಪ್ರಮೇಯ ಅನೇಕ ಸಲ ಬಂದೊದಗುತ್ತದೆ. ಆಗ ಸತ್ಯ ಸಂಗತಿಯೆನ್ನುವುದು ಅವನ ಸಂಶೋಧನೆಯಿಂದ ದೂರ ಉಳಿಯುತ್ತದೆ. ಸತ್ಯವೇ ಇತಿಹಾ ಸದ ಕಣ್ಣು. ಇತಿಹಾಸ ಸಂಶೋಧನೆಯೆಂದರೆ ಸತ್ಯದ ಅನ್ವೇಷಣೆ

ತಾನೇ. ಅದು ದೂರ ಉಳಿದರೆ, ಅಥವಾ ಆ ಸತ್ಯವನ್ನು ಮರೆ ಮಾಜಿದರೆ. ಕಣ್ಣಿಲ್ಲದವನ ಪರದಾಟದಂತೆ ಸಂಶೋಧನ ಕಾರ್ಯದ ಪಣೆಬರಹವಾಗುತ್ತದೆ. ಆದಕಾರಣ ನಿಜವಾದ ಸಂಶೋಧಕನು ಸ್ವನಿಷ್ಠವಾದ. ಅಥವಾ ಬಾಹ್ಯದ ಸೆಳೆತಗಳನ್ನು ಮೀರಿ ನಿಂತು ಸಂಕುಚಿತ ಪ್ರವೃತ್ತಿಯನ್ನು ತಡೆದುಕೊಂಡು, ತನ್ನ ಕಾರ್ಯವನ್ನು ಮುಂದುವರಿಸುತ್ತಾನೆ.

ವಿದ್ವತ್ತು, ಇತಿಹಾಸಪ್ರಜ್ಞೆ ಮತ್ತು ವಸ್ತುನಿಷ್ಠತೆ ಇದ್ದರೂ. ಗತಕಾಲದ ಸಂಪೂರ್ಣ ಸತ್ಯವು ಸಂಶೋಧಕನ ಹಿಡಿತಕ್ಕೆ ಯಾವಾ ಗಲೂ ಸಿಕ್ಕುವುದೆಂಬ ಭರವಸೆಯಿಲ್ಲ ! ಎಂದರೆ, ನಿರ್ವಿವಾದ ಮತ್ತು ಖಚಿತವಾದ ಆಧಾರಗಳು ಸಿಕ್ಕಿ. ಅಪ್ಪಟ ಸತ್ಯಸಂಗತಿ ಹೊರಪಡುವ ಸಂದರ್ಭಗಳು ಸಾಮಾನ್ಯವಾಗಿ ಕಡಿಮೆಯೇ. ಆಗ ಸಂಶೋಧನೆಯೆಂಬುದು ಅನುಮಾನ, ತರ್ಕಗಳಿಂದ ಹೊರಟ ಸತ್ಯ ವಾಗುತ್ತದೆ. ತರ್ಕದ ಒಂದೊಂದೆ ಮೆಟ್ಟಲನ್ನು ಏರಿ ಗತಕಾಲದ ಬಾಗಿಲನ್ನು ತೆರೆದು, ಸಂಶೋಧಕನು ಕಣ್ಣಿರಿಸಿದುದಾದರೂ, ಮುಬ್ಬುಗತ್ತಲೆಯಲ್ಲಿ ಕಾಣುವ ವಸ್ತುಗಳ ಸ್ಥಿತಿಯಂತೆ, ಆ ಸತ್ಯ ಶೋಧವಿರುತ್ತದೆ. ಈ ಕಾರಣವೇ ಅದನ್ನು ಅನುಮಾನಿತ ಸತ್ಯ, ಅಥವಾ ಆಧಾರಸಹಿತವಾದ ಊಹನೆ (hypothesis) ಎಂದು ಕರೆಯಬೇಕು.

ಆದರೆ ಇಂಥ ಊಹನೆ ಬೇರೆ, ಕಲ್ಪನೆ (imagination) ಬೇರೆ ! ನಿಮಿತ್ತ ಮಾತ್ರದ ಅಧಾರವನ್ನಿಟ್ಟುಕೊಂಡು, ಅಷ್ಟರ ಮೇಲಿಂದ ಗತಕಾಲದ ವಿಷಯದಲ್ಲಿ ಕಲ್ಪನೆಯನ್ನು ಹರಿಬಿಡು ವುದು ಅದೆಂತು ಶೋಧನೆಯಾದೀತು? ಆದರೂ ಹೊಸತೊಂದು ಮಾತನ್ನು ಕಂಡಹಿಡಿಯಬೇಕೆನ್ನುವ ಉತ್ಸಾಹದ, ಅಥವಾ ಅದ ಕ್ಕಾಗಿಯೇ ಆಧಾರಗಳನ್ನು ಎಳೆತರುವ ಭರದಲ್ಲಿ ಈ ಊಹನೆಯು ಬರಿಯ ಕಲ್ಪನೆಯಾಗುವುದೂ ಉಂಟು.

ಇತಿಹಾಸದ ಎರಡು ಮುಖಗಳಾದ ಸಾಂಗತಿಕ ಇತಿಹಾಸ. ಮತ್ತು ವೈಚಾರಿಕ ಇತಿಹಾಸ ಇವುಗಳಲ್ಲಿ ಪೈಯವರ ಸಂಶೋ ಧನೆಯು ಸಾಂಗತಿಕ ಇತಿಹಾಸಕ್ಕೆ ಅದರಲ್ಲಿಯೂ ಅತಿ ಪ್ರಾಚೀನ

ಇತಿಹಾಸಕ್ಕೆ ಸಂಬಂಧಪಟ್ಟುದಷ್ಟೆ. ಅವಕ್ಕೆ ಬೇಕಾದ ಖಚಿತ ಪ್ರಮಾಣಗಳು ಕಡಿಮೆ. ಆದ್ದರಿಂದ ಪೈಯವರ ಸಂಶೋಧನೆಯಲ್ಲಿ ನಿಶ್ಚಿತ ಸತ್ಯ ಸಂಗತಿಗಳ ಜೊತೆಗೆ ಅನುಮಾನಿತ ಸತ್ಯದ ಅಂಶಗಳೂ ಹೇರಳವಾಗಿವೆ. ಅವುಗಳ ಊಹನೆಗೆ ಆಧಾರಗಳು ಇರುವಷ್ಟರ ಮಟ್ಟಿಗೆ ಮಾತ್ರ ಅವರ ಊಹನೆ ಮುಂದುವರಿಯುತ್ತಿದ್ದಿತು.

> 'ಯಕ್ಷರಿಗೆ ದೇವತೆಗಳಲ್ಲಿ ಒಂದು ಪದವಿಯನ್ನು ಆರ್ಯರ ಪುರಾಣಗಳಲ್ಲಿ ಇತ್ತಿರುವುದರಿಂದ ಅವರು ಪ್ರಾಯಶಃ ಆರ್ಯೇತರರಾಗಿರಬೇಕೆಂದು ನನಗೆ ತೋರುತ್ತವೆ.' 'ತಕ್ಕ ಸಾಹಿತ್ಯವು ಇದ್ದಿಲ್ಲದ ಭಾಷೆಯಲ್ಲಿ ಸರ್ವಥಾ ಈ ಪ್ರಮಾಣದಿಂದ (ಸಂಸ್ಕೃತ ಭಾಷೆಯಲ್ಲಿ ಕನ್ನಡ ಮಾತುಗಳು) ಸೇರಿರವು ಎಂದೂ ಹತ್ತು ಮುಂದಿಯ ಓದಿಕೆಯ ಹಾಗೂ ತಿಳಿವಳಿಕೆಯ ಬಗ್ಗೆ ಎಂದೇ ಕೊರೆದಿಟ್ಟ ಈ ಶಾಸನಗಳಲ್ಲಿ ಹೀಗಾದರೆ. ಆಗಣ ಸಮಸಾಮಯಿಕವಾದ ಸಾಹಿತ್ಯದಲ್ಲಿ ಈ ಪ್ರಮಾಣವು ಇನ್ನೂ ಹಿಗ್ಗಿರಬೇಕು ಎಂದು ಸ್ವಯಂ ವ್ಯಕ್ತವಾಗುವುದರಿಂದ ಹಲ್ಮಿಡಿಯ ಶಿಲಾಲೇಖನದ...... ನಾಕಷ್ಟು ಹಿಂದಿನಿಂದಲೇ ಕನ್ನಡದಲ್ಲಿ ಸಂಸ್ಕೃತ ಮಿಶ್ರಿತವಾದ. (ಆತ ಏವ ಛಂದೋಬದ್ಧವೂ ಆದ) ಕನ್ನಡ ಸಾಹಿತ್ಯವು ಇದ್ದಿರಬೇಕು.'

ಪೈಯವರ ಸಂಶೋಧನ ಬರಹಗಳಲ್ಲಿ ಇಂಥ 'ಇದ್ದಿರಬೇಕು', 'ತೋರುತ್ತದೆ', 'ಪ್ರಾಯಶಃ', 'ಹೀಗಿರಲಾರದು' ಎಂಬ ಸರಣಿಯು ಹೇರಳವಾಗಿ ಕಂಡುಬರುತ್ತದೆ. ಆದರೆ ಮೇಲೆ ಹೇಳಿದಂತೆ, ಆ ಊಹನೆಯು ಮಟ್ಟಿಗೆ ಆಧಾರದ ಬೆಂಬಲ ಇದ್ದೇ ಇರುತ್ತಿತ್ತೆಂಬುದು ಮಹತ್ವದ್ದು.

ಈ ಮಾತನ್ನು ತುಸು ವಿಸ್ತರಿಸಿ ಹೇಳುವುದಕ್ಕೆ ಒಂದು ಕಾರಣವಿದೆ. ಪ್ರಚಲಿತ ಸಂಶೋಧನಾಕ್ರಮದಲ್ಲಿ ಮೂರು ಮಾರ್ಗಗಳಿವೆ. ಹಲವಾರು ಪ್ರಮಾಣಗಳ ಮನನ, ಮಥನಗಳಿಂದ ಹೊಸ ಮಾತೊಂದು ಬೆಣ್ಣೆಯಂತೆ ತಾನಾಗಿ ತೇಲಿಬರುವುದು

ಒಂದು ಬಗೆ. ಎರಡನೆಯದೆಂದರೆ, ಒಂದೆರಡು ಪ್ರಮಾಣಗಳ ಮನನದಿಂದ ಹೊಸ ಮಾತೊಂದು ಹೊಳೆದಾಗ, ಅನ್ಯ ಪ್ರಮಾಣ ಗಳನ್ನು ಅರಸಿಕೊಂಡು ಹೋಗುವುದು; ಅವುಗಳಿಂದ ಮುನ್ನಿನ ಅನುಮಾನವು ಸ್ಥಿರಪಟ್ಟರೆ ಮಾತ್ರ ಅದನ್ನು ಒಂದು ಸಂಶೋಧಿತ ಹೊಸ ಮಾತೆಂದು ಗ್ರಹಿಸಿ ಮಂಡಿಸುವುದು. ಮೂರನೆಯ ಮಾರ್ಗವೆಂದರೆ, ತನ್ನ ಮನಸ್ಸಿಗೆ ಫಕ್ಕನೆ ಹೊಳೆದಂತಹ ಅಥವಾ ಉದ್ದೇಶಪೂರ್ವಕವಾಗಿ ಸ್ವನಿಷ್ಠವಾದ ಹೊಸ ಮಾತನ್ನು ಮಂಡಿಸಬೇಕಾದಾಗ ಅದರ ಸಮರ್ಥನೆಗೆಂದೇ ಪ್ರಮಾಣಗಳನ್ನು ಎಳೆದು ತಂದು, ಜೋಡಿಸುವುದು! ಗೋವಿಂದ ಪೈಯವರ ಸಂಶೋಧನೆಯು ಮೊದಲೆರಡರ ಮಾರ್ಗಗಳನ್ನೇ ಅನುಸರಿಸಿ ತ್ತಲ್ಲದೆ, ಎಂದಿಗೂ ಮೂರನೆಯದ್ದನ್ನಲ್ಲ. ಅವರಲ್ಲಿಯ ಸತ್ಯ ದೃಷ್ಟಿಯೂ ವಿಶಾಲ ಮನೋಭಾವವೂ. ಆ ಬಗೆಯ ಸಂಶೋಧ ನೆಗೆ ಅವಕಾಶವನ್ನೀಯಲಿಲ್ಲವೆಂಬುದನ್ನು ಗಮನಿಸಬೇಕಾಗಿದೆ.

ಪೈಯವರು ತಾನು ಮಂಡಿಸಿದ ಹೊಸ ಮಾತು ಒಂದು ಸಿದ್ಧಾಂತ. ಅದು ಬದಲಾಗದಂತಹುದು ಎಂಬುದಾಗಿ ಭಾವಿಸಿ ದ್ದಿಲ್ಲ. ಅನ್ಯ ವಿದ್ವಾಂಸರು ಅದರ ಕುಂದನ್ನು ಎತ್ತಿ ತೋರಿಸಿದರೆ ಅಥವಾ ಹೊಸ ಪುರಾವೆ ದೊರೆತು ತಮಗೇ ಆ ದೋಷ ಕಂಡು ಬಂದರೆ, ತಮ್ಮ ಅಭಿಪ್ರಾಯವನ್ನು ಬದಲಿಸುವುದಕ್ಕೆ ಅವರು ಹಿಂದು ಮುಂದು ನೋಡುತ್ತಿದ್ದಿಲ್ಲ. ರನ್ನನ ಅಲಭ್ಯವಾದ ಕೃತಿ ಪರಶುರಾಮ ಚರಿತದ ಕಥಾನಾಯಕನಾರು ಎಂಬ ವಿಷಯದ ಅವರ ಸಂಶೋಧನೆಯನ್ನು ಇದಕ್ಕೆ ಒಂದು ನಿದರ್ಶನವಾಗಿ ಕೊಡ ಬಹುದು. ಮೊದಲಿಗೆ, ಈ ಪರಶುರಾಮನು ಸುಭೌಮನನ್ನು ಗೆದ್ದ ಪರಶುರಾಮನು ಮತ್ತು ಅವನು ಜೈನನು ಎಂಬ ವಿಚಾರ ವನ್ನು ಅವರು ಮಂಡಿಸಿದರು. ಆಮೇಲೆ ಗುಣಭದ್ರನ ಉತ್ತರ ಪುರಾಣವನ್ನು 'ವಾಚಿಸಿದಾಗ' ಸುಭೌಮನೇ ಪರಶುರಾಮನನ್ನು ಕೊಂದದ್ದು ಎಂಬುದಾಗಿ ತಿಳಿಯಿತು. ಎಂದರೆ, ಹೀಗೆ ಸೋತ ಪರಶುರಾಮ(ಜೈನ)ನ ಕಥೆಯನ್ನು ರನ್ನನು ಬರೆಯಲಾರನು ಆದ್ದ ರಿಂದ ಇವನು ವೈದಿಕನಾದ, ಕ್ಷತ್ರಿಯ ಸಂಹಾರಕ ಪರಶುರಾಮ

ದೇವರು ಎಂಬುದಾಗಿ ತಮ್ಮ ವಿಚಾರವನ್ನು ಮಾರ್ಪಡಿಸಿಕೊಂಡರು. ಆದರೆ ಅದು ಅವರಿಗೇನೇ ಸಮರ್ಪಕವೆನಿಸದೆ, ಪುನರಾಲೋಚಿಸಿದರು. ಸ್ವಯಂ ಸಂದೇಹಗಳನ್ನು ಮಂಡಿಸಿ ವಿವೇಚಿಸಿ ಪರಶುರಾಮ ಚರಿತೆಯು ಜೈನಕಾವ್ಯವೇ ಎಂಬುದಾಗಿ ಮತ್ತೆ ತಮ್ಮ ಮೊದಲಿನ ನಿರ್ಣಯಕ್ಕೇ ಬಂದುಬಿಟ್ಟರು! ಕೊಟ್ಟ ಕಾರಣಗಳು ಮಾತ್ರ ತುಸು ಬೇರೆಯಾಗಿದ್ದುವು. ಈ ಅಭಿಪ್ರಾಯ ವ್ಯತ್ಯಾಸಗಳ ಹಿಂದಿನ ಅವರ ಸತ್ಯನಿಷ್ಠೆ ಹಾಗೂ ಪ್ರಾಮಾಣಿಕತೆಯ ಮನೋಭಾವವನ್ನು ಗುರುತಿಸಬೇಕು.

ಸಂಶೋಧಕನಲ್ಲಿ ಇಂಥ ಪ್ರಾಮಾಣಿಕತೆಯು ಒಂದು ಅಪೇಕ್ಷಣೀಯ ಗುಣವಾಗಿದೆ. ತಾನು ಪರಿಶೀಲಿಸಿದ ಆಧಾರ, ಆಕರಗಳಿಂದ ಪ್ರಾಮಾಣಿಕವಾಗಿ ಕಂಡುಕೊಂಡ ಹೊಸ ಮಾತನ್ನು ಅನ್ಯ ಒತ್ತಾಯಗಳಿಗೆ ಬಲಿಯಾಗಿ, ಬದಲಿಸ ಹೋಗದಂತೆ ಅವನು ಧೈರ್ಯವಂತನಾಗಿರಬೇಕು. ಅದರಂತೆ ತನ್ನ ಅಭಿಪ್ರಾಯ ತಪ್ಪೆಂದು ಕಂಡುಬಂದಾಗ ಅದನ್ನು ಒಪ್ಪಿ ತಿದ್ದಿಕೊಳ್ಳುವ ವಿನಯವೂ ಇರಬೇಕು. ಹೀಗೆ ಪ್ರಾಮಾಣಿಕತೆಯು ಧೈರ್ಯ, ವಿನಯ, ಇವೆರಡನ್ನೂ ಅಭಿವ್ಯಕ್ತಗೊಳಿಸುವ ಸಾಮರ್ಥ್ಯವುಳ್ಳದ್ದಾಗಿದೆ. 'ವಿದ್ಯಾ ದದಾತಿ ವಿನಯಂ' ಎಂಬುದು ಕೆಲವೇ ವಿದ್ವಾಂಸರಿಗೆ ಅನ್ವಯಿಸುವ ಸೂಕ್ತಿಯಾಗಿದೆ. ಅದರಲ್ಲಿ, ತಾನೊಂದು ಹೊಸ ಶೋಧನೆ ಮಾಡಿದೆನೆಂಬ ಹೆಮ್ಮೆ ಮೂಡಿಬಿಟ್ಟರೆ ಅಂಥವರಿಂದ ವಿನಯವು ಮೂರು ಮಾರು ಹಿಮ್ಮೆಟ್ಟುತ್ತದೆ.

ಪೈಯವರ ವಿನಯ, ಶಾಲೀನತೆಗಳು ಗಾದೆಮಾತಿನಂತೆ ಸ್ಥಿರಗೊಂಡಿವೆ. ಈ ಗುಣವು ಅವರ ಸಂಶೋಧನಾ ಕ್ರಮದಲ್ಲಿಯೂ ಎದ್ದು ಕಾಣುತ್ತದೆ. ತಪ್ಪನ್ನು ಒಪ್ಪಿಕೊಳ್ಳುವಾಗ, ತಮ್ಮ ಪ್ರತಿಷ್ಠೆಗೆ ಕುಂದು ಬಂದೀತೆಂಬ ವಿಚಾರವೇ ಅವರಲ್ಲಿ ಬರುತ್ತಿದ್ದಿಲ್ಲ. ಅವರ ಪ್ರಾಮಾಣಿಕತೆ ಅಷ್ಟು ಮುಕ್ತ ಮನಸ್ಸಿನದಿರುತ್ತಿತ್ತು. ಮೇಲೆ ಹೇಳಿದ ರನ್ನನ ಕಾವ್ಯಗಳನ್ನು ಕುರಿತ ಸಂಶೋಧನೆಯಲ್ಲಿ ತಪ್ಪೊಪ್ಪಿಕೊಳ್ಳುವ ಬಗೆಗೆ ಒಂದು ನಿದರ್ಶನವಿದೆ.

ರನ್ನನ ಅಜಿತಪುರಾಣದಲ್ಲಿ ಬಂದ ಒಂದು ಪದ್ಯದ ಪ್ರಕಾರ,

ಅವನು 'ತನ್ನ ಮಕ್ಕಳಾದ ರಾಯ ಮತ್ತು ಅತ್ತಿಮಬ್ಬೆ ಎಂಬವರಿರ್ವರ ಹೆಸರುಗಳಿಗಾಗಿ ಪರಶುರಾಮ, ಚಕ್ರೇಶ್ವರ ಚರಿತೆಗಳು ರಚಿಸಲ್ಪಟ್ಟುವು' ಎಂಬೊಂದು ಅಭಿಪ್ರಾಯವನ್ನು ಬೇರೊಬ್ಬರು ಮುಂದಿಡಿಸಿದ್ದರು. ಈ ಅಭಿಪ್ರಾಯವನ್ನು 'ಸಾಕಷ್ಟು ವಿಮರ್ಶಿಸದೇ, ಅವು ಸರಿಯಾಗಿರಬೇಕೆಂದೇ ನಂಬಿ' ಆಧರಿಸಿ, ತಾವೂ ಮುಂದುವರಿದರಂತೆ. ಅದು ತಪ್ಪೆಂದು ತೋರಿದಾಗ ಪೈಯವರು—

" **ಈಗ ಆಲೋಚಿಸಿದರೆ,** ಆ ಪದ್ಯದಿಂದ ಆ ಅರ್ಥವು ಹೊರಡುವಂತಿಲ್ಲ...... ಅವೆರಡು ಕೃತಿಗಳನ್ನು ರನ್ನನು ತನ್ನ ಮಕ್ಕಳ ಬಗ್ಗೆ ರಚಿಸಿದುದೂ ಅಲ್ಲ, ಅವರಿಗೆ ಅಂಕಿತ ಮಾಡಿದುದೂ ಅಲ್ಲವೆಂದು ನಿಷ್ಕೃಷ್ಟವಾಗುವುದರಿಂದ ಈ ಮೊದಲು ನನ್ನಿಂದ ಆಗಿಹೋದ ಆ ತಪ್ಪಿಗೆ ವಿಷಾದಪಡುತ್ತೇನೆ."

ಆ ತಪ್ಪಿಗೂ, ಈ ವಿಷಾದಕ್ಕೂ ೧೨ ವರ್ಷಗಳ ಅಂತರವಿದೆ! ತಾವಾಗಿ ಆ ತಪ್ಪನ್ನು ಒಪ್ಪಿಕೊಂಡುದು, ಧಾರವಾಡದ ಕರ್ನಾಟಕ ಸಂಶೋಧನ ಸಂಸ್ಥೆಯವರು ಏರ್ಪಡಿಸಿದ ಉಪನ್ಯಾಸಮಾಲೆಯ ಪ್ರಥಮ ಉಪನ್ಯಾಸದ ಆರಂಭದಲ್ಲಿಯೇ. ಆ ಬಗೆಗೆ ಆತುರವು ಪೈಯವರ ವ್ಯಕ್ತಿತ್ವದ ಹಾಗೂ ಬರೆಹದ ತೂಕವನ್ನು ಬಹು ಪಾಲು ಹೆಚ್ಚಿಸುವಂಥದಾಗಿದೆ.

ಆದರೆ ತಮ್ಮ ಯಾವೊಂದು ಅಭಿಪ್ರಾಯವು ಸರಿಯೆಂದು ತಮಗೆ ಖಾತ್ರಿಯಾಗಿದ್ದಾಗ, ಇತರ ವಿದ್ವಾಂಸರು ಅದನ್ನು ಎಷ್ಟೇ ಬಲವತ್ತರವಾಗಿ ಖಂಡಿಸಿದರೂ, ಪೈಯವರು ಅದಕ್ಕೆ ಕೊಂಚ ವಿಸ್ತಾರವಾಗಿಯೇ ಪ್ರತ್ಯುತ್ತರವನ್ನು ಕೊಟ್ಟು ತಮ್ಮ ನಿಲುಮೆಯನ್ನು ಸಮರ್ಥಿಸಿಕೊಳ್ಳುತ್ತಿದ್ದರು. ಆ ಧೈರ್ಯ ಅವರಲ್ಲಿ ಶೇಕಡ ನೂರರಷ್ಟು ಇದ್ದಿತು. ಕರ್ನಾಟಕ–ಕರ್ಣಾಟಕ ವಾದ, ಕನ್ನಡ ಷಟ್ಪದಿಗಳು, ಸೋಮರಾಜನ ಉದ್ಭಟ ಕಾವ್ಯ—ಇವೇ ಮುಂತಾದ ವಿಷಯಗಳ ಮೇಲೆ ಬಂದ ಆಕ್ಷೇಪಗಳಿಗೆ ಕೊಟ್ಟ ಉತ್ತರಗಳಲ್ಲಿ, ಅನ್ಯರ ಅಭಿಪ್ರಾಯಖಂಡನೆಯ ವೈಖರಿಯನ್ನು ಕಾಣುತ್ತೇವೆ.

ಹೀಗೆ ಪ್ರತ್ಯುಕ್ತಿಯನ್ನು ಕೊಡುವಾಗ, ಆ ಅನ್ಯ ವಿದ್ವಾಂಸರ ಮನನೋಯುವಂತಹ ಪದಗಳನ್ನು ಅವರು ಎಂದೂ ಬಳಸಿದು ದಿಲ್ಲ. ಅವರ ವಿಚಾರಸರಣಿಯನ್ನು ಗೌರವದಿಂದಲೇ ಕಂಡು, ಅವರ ವಿಚಾರಗಳನ್ನು ಒಂದೊಂದಾಗಿ ಖಂಡಿಸುತ್ತಿದ್ದರಲ್ಲದೇ, ತಮ್ಮ ನಿಲುಮೆಯ ಸಮರ್ಥನೆಗೆ ಹೊಸತಾಗಿ ದೊರೆತ ಪುರಾವೆ ಗಳನ್ನೂ ಕೆಲವು ಕಡೆ ಕೊಟ್ಟಿದುಂಟು. ಚಾಳುಕ್ಯ ವಿಕ್ರಮನ ಪಟ್ಟಬಂಧದ ತೇದಿಯ ವಿಚಾರದಲ್ಲಿ ನಾ. ಶ್ರೀ. ರಾಜಪುರೋ ಹಿತರ ಅಭಿಪ್ರಾಯದ ಖಂಡನೆ ಮತ್ತು ಮಹಾವೀರಸ್ವಾಮಿಯ ಪರಿನಿರ್ವಾಣದ ವಿಚಾರದಲ್ಲಿ ಶಾಂತಿರಾಜ ಶಾಸ್ತ್ರಿಗಳಿಗೆ ಕೊಟ್ಟ ಪ್ರತ್ಯುತ್ತರ ಇವು ಈ ದೃಷ್ಟಿಯಿಂದ ಮಾದರಿಯಾಗಿವೆ.

## ಉಪಸಂಶೋಧನೆ

"ಶ್ರೀ ಗೋವಿಂದ ಪೈಯವರ ಸಂಶೋಧನೆಯನ್ನು ಒಂದು ದೊಡ್ಡ ಕಾರ್ಖಾನೆಯೆನ್ನಬಹುದು. ಆ ಕಾರ್ಖಾನೆಯಲ್ಲಿ ಮುಖ್ಯ ಉತ್ಪತ್ತಿಯಷ್ಟೆ ಬೆಲೆಯುಳ್ಳದ್ದು ಉಪಉತ್ಪತ್ತಿ. ಮೂಲ ನಿರ್ಣ ಯಕ್ಕೆ ಬರುವ ಜಾಡಿನಲ್ಲಿ ಕಾಣುವ ಇತರ ಪ್ರತಿಯೊಂದು ಸಂಗತಿಯ ಪೂರ್ಣ ನಿರ್ಣಯ ಮಾಡಿಯೇ ಅವರು ಮುಂದು ವರಿಯುತ್ತಾರೆ" ಎಂಬುದಾಗಿ ಡಾ॥ ಎಸ್. ಎಂ. ವೃಷಭೇಂದ್ರ ಸ್ವಾಮಿಯವರು ಬರೆದಿದ್ದಾರೆ. 'ಸಿಂಹದ ಗವಿಯಲ್ಲಿ ಮೊನಿನ ಹೆಜ್ಜೆ' (ದೀವಿಗೆ–ಭಾಗ ೧). ಇದು ಅತ್ಯಂತ ಯಥಾರ್ಥವಾದ ಮಾತು. ಆ ಮಾತಿಗೆ ಒಂದೆರಡು ನಿದರ್ಶನಗಳನ್ನು ಅವರು ಕೊಟ್ಟದ್ದಕ್ಕೆ ನಾವೂ ಕೆಲವನ್ನು ಸೇರಿಸಬಯಸುತ್ತೇವೆ. ನೃಪ ತುಂಗನ ಮತ ವಿಚಾರ ಮಾಡುವ ಕಾಲಕ್ಕೆ ಜಿನಸೇನಾಚಾರ್ಯನ ಕಾಲವಿಚಾರ, ಪಂಪನ ದೇಶಕಾಲ ವಿಚಾರ ಸಂದರ್ಭದಲ್ಲಿ ಅರಿ ಕೇಸರಿಯ ಕಾಲ, ದೇಶಗಳ ಪರಾಮರ್ಶೆಯೂ, ಅದರಂತೆ, ವಾಕಾಟಕ–ಪಲ್ಲವರ ಬಗ್ಗೆ ಬರೆಯುವಾಗ, ಚೇದಿ, ಚೋಳ ರಾಜರ ಸಾದ್ಯಂತ ವೃತ್ತಾಂತವೂ ವಿವರವಾಗಿ ಬಂದಿವೆ. ಹೀಗೆ

ತಮ್ಮ ಮುಖ್ಯ ಸಂಶೋಧನೆಗೆ ಒಂದು ಮಾತನ್ನು ಪುರಾವೆಯಾಗಿ ತೆಗೆದುಕೊಳ್ಳುವುದಿದೆಯೆಂದಾಗ, ಆ ಇನ್ನೊಂದು ಮಾತನ್ನೂ ಸಿದ್ಧಾಂತದ ಮಟ್ಟಕ್ಕೆ ನಿಲ್ಲಿಸಿಕೊಂಡೇ ಅವರು ಮುಂದೆ ಸಾಗುತ್ತಿದ್ದರು. ಇದರಿಂದಾಗಿ ಅವರ ಲೇಖನಗಳು ಒಂದೆರಡಲ್ಲ, ಪತ್ತಾರು ಹೊಸ ಮಾತುಗಳನ್ನು ಒಳಗೊಂಡು ಅತ್ಯಂತ ಮೌಲಿಕವೆನಿಸಿದುವು.

ಈ ಉಪಪ್ರವೃತ್ತಿಯು ಇನ್ನೊಂದು ಪರಿಯೆಂದರೆ, ಯಾವುದೊಂದು ಹೊಸ ಮಾತನ್ನು ಮಂಡಿಸಿದಾಗ ಅದಕ್ಕೆ ಎಲ್ಲೆಲ್ಲಿಂದಲೋ ಸಾದೃಶ್ಯಗಳನ್ನು ಹುಡುಕಿ ಹೇಳುವುದು. ಪೈಯವರ ಬಹುಶ್ರುತತ್ವ ಹಾಗೂ ಪ್ರತ್ಯುತ್ಪನ್ನಮತಿತ್ವದ ಫಲವಿದು. ಬುದ್ಧನ ಜನನ, ಬೋಧಿಜ್ಞಾನ ಮತ್ತು ಪರಿನಿರ್ವಾಣ ಇವು ಮೂರೂ ಒಂದೇ ತಿಥಿಯಂದು ಜರುಗಿದುವಷ್ಟೆ. ಈ ಯೋಗಾಯೋಗವು ಇತಿಹಾಸದಲ್ಲಿ ಅಪೂರ್ವವಾದದ್ದೇನೂ ಅಲ್ಲ. ಮುಹಮ್ಮದ ಪೈಗಂಬರನು ರಬ್ಬಿ ಉಲ್-ಆವಲ್ ತಿಂಗಳದ ೧೨ನೇ ದಿನ ಸೋಮವಾರವೇ ಹುಟ್ಟಿದ್ದು; ಮುಂದೆ ಬೇರೆ ವರ್ಷದ ಅದೇ ದಿನ ವಾರದಂದು ತೀರಿಕೊಂಡದ್ದು, ಅದರಂತೆ ಜನನ ಮರಣಗಳ ಮಿತಿಯೂ (ಎಪ್ರಿಲ್ ೨೩) ಒಂದೇ ಆಗಿದ್ದಿತು ಎಂಬ ಸಾದೃಶ್ಯಗಳನ್ನು ಪೈಯವರು ಕೊಟ್ಟಿದ್ದಾರೆ. ಪೈಯವರು ಬಿಜ್ಜಳ-ಬಸವೇಶ್ವರ ಸಂಬಂಧ ವಿಚಾರವಾಗಿ ೨ನೇ ಹೆನ್ರಿ-ಬೆಕೆಟ್‌ರ ಹೋಲಿಕೆ ಕೊಟ್ಟಿದ್ದನ್ನೂ ಗಮನಿಸಬೇಕು.

## ಪೈ ಸಂಶೋಧನೆ ಎಷ್ಟರಮಟ್ಟಿಗೆ ಕ್ಲಿಷ್ಟ?

ಗೋವಿಂದ ಪೈಯವರ ಗದ್ಯ ಲೇಖನಗಳು—ಅವರ ಕವಿತೆಗಳಂತೆಯೇ ಕ್ಲಿಷ್ಟ ಹಾಗೂ ನೀರಸವಾಗಿವೆ ಎಂಬ ಸಾಮಾನ್ಯ ಪ್ರತೀತಿ ಇದೆಯಷ್ಟೆ. ನಮ್ಮ ಅಭಿಪ್ರಾಯದಲ್ಲಿ ಇದು ಸಹಜವಾದ 'ಆರೋಪ'ವೇ. ಅದನ್ನು ಮರೆಮಾಜುವ ಅಥವಾ ವಿರೋಧಿಸುವ ಪ್ರಯತ್ನವನ್ನೇನೂ ಇಲ್ಲಿ ಮಾಡುವುದಿಲ್ಲ.

ಅವರ ಪೈಯವರ ಬರವಣಿಗೆ ಈ ರೀತಿ ಇರುವುದರ ಹಿನ್ನೆಲೆ ಯನ್ನು ಮನಗಂಡರೆ. ಈ ಆರೋಪವು ಎಷ್ಟರಮಟ್ಟಿಗೆ ನಿಜ ಎಂಬುದು ತಂತಾನೆ ಸ್ಪಷ್ಟವಾದೀತು.

ಮೊದಲಲ್ಲಿ ಸಂಶೋಧನೆಯ ವಿಷಯವೇ ಕ್ಲಿಷ್ಟ ಹಾಗೂ ಜಟಿಲವಾದುದು. ಅದರಲ್ಲಿಯೂ ಗೋವಿಂದ ಪೈಯವರು ವಿದ್ವಾಂಸಮಂಡಲಿಯಲ್ಲಿಯೆ ಉಚ್ಚಮಟ್ಟದವರು. ಹೀಗಾಗಿ ಅವರ ವಿಚಾರಗಳ ಪರಿಜ್ಞಾನವು ವಾಚಕನ ತಿಳಿವಿನ ಮಟ್ಟ ವನ್ನೂ ಹೊಂದಿಕೊಂಡಿರುತ್ತದೆ. ಗಾಂಧೀಜಿಯವರ ಮಾರ್ಗವು ಅವರ ಅನೇಕ ಅನುಯಾಯಿಗಳಿಗೆ ಹೇಗೆ ದುಸ್ಸಾಧ್ಯವಾಯಿತೊ. ಹಾಗೆಯೆ ಪೈಯವರ ಸಂಶೋಧನ ಮಾರ್ಗವು ಸಾಮಾನ್ಯ ವಾಚಕ–ವಿದ್ವಾಂಸರಿಗೆ ತುಸು ಕಠಿಣವಾಗಿ ತೋರಿದರೆ ಅದು ಸಹಜವೇ.

ವಿಷಯವು ಹೀಗಾದರೆ. ಅದನ್ನು ಹೇಳುವ ರೀತಿಯೂ ಒಂದಿಷ್ಟು ಗಡುಸಾದುದೇ. ಒಂದು ಸಂಶೋಧನ ಬರಹದಲ್ಲಿ ಆ ವಿಷಯ ಪೂರ್ತಿಗಾಗಿ ಅನೇಕ ಉಪ ವಿಷಯಗಳನ್ನೂ ತರು ತ್ತಿದ್ದರು ಎಂದು ಮೇಲೆ ಹೇಳಿದೆಯಷ್ಟೆ. ಇದರಿಂದಲೂ ಅವರ ಬರಹ ಕ್ಲಿಷ್ಟವಾಗುತ್ತಿತ್ತು. ಆದರೆ ಮುಖ್ಯ ವಿಷಯಕ್ಕೆ ಪೋಷಕ ವಾಗದಂತಹ. ಯಾವ ಮಾತನ್ನೂ ಅವರು ಹೇಳುತ್ತಿದ್ದಿಲ್ಲ. ಹೇಳಬೇಕಾದ ಮಾತುಗಳನ್ನು ನೇರವಾಗಿ ಸಂಕ್ಷೇಪವಾಗಿ. ಆದರೆ ವಿಷಯದ ಪೂರ್ತಿ ಬೋಧೆಯಾಗುವಂತೆ ಅವರ ನಿರೂಪಣೆ ಇದ್ದಿತು.

'ಬುದ್ಧನ ಪರಿನಿರ್ವಾಣದ ಕಾಲ' ಎಂಬುದು ಅವರ ಒಂದು ಲೇಖನದ ಶೀರ್ಷಿಕೆಯಾಗಿದೆ. ಆದರೆ ಅದರ ಮೊದಲ ವಾಕ್ಯವು ಅಶೋಕನ ಶಾಸನಗಳ ಕಾಲನಿರ್ಣಯದಿಂದ ಆರಂಭವಾಗುತ್ತದೆ. ಇವರ ಪ್ರಸಕ್ತಿ ಈಗೇಕೆ? ಬುದ್ಧನ ಕಾಲವಿಚಾರಕ್ಕೂ ಇದಕ್ಕೂ ಹೇಗೆ ತಳುಕು ಹಾಕುತ್ತಾರೆಂಬುದರ ಪೂರ್ವಸೂಚನೆಯನ್ನು ಪೈಯವರು ಕೊಟ್ಟುದಿಲ್ಲ. ಅಂಥವರ ದೃಷ್ಟಿಯಲ್ಲಿ ಪೀಠಿಕಾ ರೂಪದ ಇಂಥ ಮಾತುಗಳೂ ಅನಾವಶ್ಯಕವೇ !

ಪೈಯವರ ಭಾಷಾಶೈಲಿಯೂ ಗಡುಚಾದುದು. ಮಂಡಿಸ ಬೇಕೆಂದಿರುವ ಒಂದು ವಿಚಾರವು ಪೂರ್ಣ ಮುಗಿಯುವ ವರೆಗೆ ಪೈಯವರು ಆ ವಾಕ್ಯವನ್ನೆ ನಿಲ್ಲಿಸುತ್ತಿರಲಿಲ್ಲ. 'ನಾಗವರ್ಮರು ಎಷ್ಟು ಮಂದಿ?' ಎಂಬ ಲೇಖನದ ಓನೆಯ ಪ್ಯಾರಾದಲ್ಲಿಯ ಒಂದು ವಾಕ್ಯದಲ್ಲಿ ೭೦ಕ್ಕೆ ಮಿಕ್ಕಿ ಶಬ್ದಗಳಿವೆ! ಹಾಗೆಂದು ಆ ವಾಕ್ಯದ ಅರ್ಥಬೋಧೆಯಾಗುವಲ್ಲಿ ಯಾವ ಬಾಧಕವೂ ಇಲ್ಲ. ಇನ್ನೊಂದು ಅಡೆತಡೆಯೆಂದರೆ, ಅವರು ಬಳಸುತ್ತಿದ್ದ ಅನೇಕ ಅನೇಕ ಅಪರಿಚಿತ ಶಬ್ದಗಳು. ಅವು ನಮಗೆ ಪರಿಚಿತವಲ್ಲ ವಾದರೂ, ಆ ಶಬ್ದಗಳ ಅರ್ಥ, ಪ್ರಯೋಗಗಳಲ್ಲಿ ದೋಷ ವೇನೂ ಇಲ್ಲ.[4] ಅವುಗಳ ಬಳಕೆಯಿಂದ ನಮ್ಮ ಶಬ್ದಸಂಪತ್ತಿಯು ಬೆಳೆಯುವುದಕ್ಕೆ ಸಹಾಯಕವಾಗಿದೆ ಎಂದು ಹೇಳಬಹುದು.

ಹೀಗೆ ಒಂದು ಮಾತಿನ ಪ್ರಾಮಾಣ್ಯಕ್ಕೆ ಇನ್ನೊಂದರ ಪ್ರಸ್ತಾಪ ಅದಕ್ಕೆ ಮತ್ತೊಂದು ವಿಷಯದ ಜೋಡಣೆ, ಮಧ್ಯೆ ಅಡಿಟಿಪ್ಪಣಿ ಗಳಿಂದ ಅವುಗಳ ಸಮರ್ಥನೆ—ಈ ಕ್ರಮದಿಂದಾಗಿ ವಿಷಯ ನಿರೂಪಣೆಯು ಜಟಿಲವಾಗಿ ಕಾಣುತ್ತದೆ. ನೂರೆಂಟು ವಿಷಯ ಗಳು ಅವರ ತಲೆಯಲ್ಲಿದ್ದರೂ, ಅವರ ವಿಚಾರಧಾರೆಯಲ್ಲಿ ಗೊಂದಲ ಇರದೇ ಅದು ಖಚಿತವೂ, ತಿಳಿಯಾದುದೂ ಆಗಿದ್ದಿತು. ಆದರೆ ವಿಷಯಬಾಹುಳ್ಯ, ಸಂಕ್ಷೇಪದಲ್ಲಿಯೆ ಸಮಸ್ತವನ್ನು ಹೇಳುವ ಅವರ ಮನೋವೃತ್ತಿ—ಇವುಗಳಿಂದಾಗಿ ಅವರ ಗದ್ಯ ಬರವಣಿಗೆ ಕ್ಲಿಷ್ಟವೆನಿಸೀತು. ಆ ಕ್ಲಿಷ್ಟತೆಯಲ್ಲಿಯೂ ಸ್ಪಷ್ಟತೆ ಇದೆಯೆಂಬುದನ್ನು ನಾವು ಒತ್ತಿ ಹೇಳಬೇಕಾಗಿದೆ. ಯಾವ ಓದುಗನಿಗೆ ಜ್ಞಾನಲಾಲಸೆಯೂ, ಸಾಹಿತ್ಯೇತಿಹಾಸಗಳ ಪರಿಜ್ಞಾ ನವೂ ಇದೆಯೊ ಅವನಿಗೆ ಪೈಯವರ ಸಂಶೋಧನ ಬರಹವು ಎಂದಿಗೂ ಗಡಚಾಗಿ ತೋರಲಾಗದು.

---

[4]ಗೋವಿಂದ ಪೈಯವರ ಶಬ್ದ ಪ್ರಯೋಗಗಳ ವಿಶೇಷ ವಿಚಾರವಾಗಿ ದೀವಿಗೆ, ಭಾಗ 1ರಲ್ಲಿ ಬಂದ ಶ್ರೀ ಶೇಖರ ಇಡ್ಯರ ಲೇಖವು ಅತ್ಯಂತ ಗಣನೀಯವಾಗಿದೆ.

ಪೈಯವರ ಸಂಶೋಧನ ಲೇಖನವನ್ನು ಒಂದು ಚಕ್ರವ್ಯೂಹದ ಕೋಟೆಗೆ ಹೋಲಿಸುವುದು ಯಥಾರ್ಥವಾಗಿದೆ. ಈ ಕೋಟೆಯೊಳಗೆ ಪ್ರವೇಶ ಮಾಡುವಾಗ ಯಾವ ಗುರಿಯನ್ನು ಮುಟ್ಟಿದ್ದೇವೆ, ಅದರ ಸಾಧ್ಯತೆ ಹೇಗೆ ಎಂಬುದರ ಸ್ಪಷ್ಟ ಅರಿವು ಇಲ್ಲದೆಯೇ ಮುಂದಡಿಯಿಡುತ್ತೇವೆ. ಅದರ ದಾರಿಯು ಸುತ್ತುಸುತ್ತಿನದಾದ್ದರಿಂದ, ಹೆಜ್ಜೆಹೆಜ್ಜೆಗೆ ನಿಂತು, ಮುಂದಿನ ದಾರಿಯತ್ತ ದುಬ್ಬೇರಿಸಿ ನೋಡಬೇಕು. ಆ ಮಾರ್ಗದ ಪಕ್ಕದಲ್ಲಿ ಅನ್ಯವಿಚಾರದ ಕಿರುದಾರಿಗಳೂ, ಸಂದೇಹಗಳೆಂಬ ಸಣ್ಣ ತಗ್ಗುಗಳೂ, ಅಡಿಟಿಪ್ಪಣಿಗಳ ರೂಪದಲ್ಲಿ ದಿಬ್ಬಗಳೂ, ಅಪರಿಚಿತ ಶಬ್ದಗಳೆಂಬ ಸಣ್ಣ ಹರಳುಗಳೂ ಕಂಡುಬರುತ್ತವೆ. ಆದರೂ ಗುರಿಯನ್ನು ಮುಟ್ಟಬೇಕೆಂಬ ಆತುರವನ್ನು ಉಳಿಸಿಕೊಳ್ಳುವಷ್ಟು ಸೆಳೆತ ಇದ್ದೇ ಇರುತ್ತದೆ. ಹೀಗೆ ಕಷ್ಟಪಟ್ಟು ತುಸು ಬೆವರು ಸುರಿಸಿದಾಗ, ಅವರ ಸಂಶೋಧನೆಯೆಂಬ 'ಸತ್ಯಸೂರ್ಯ'ನ ದರ್ಶನವಾಗುತ್ತದೆ. ಆ ಸೂರ್ಯನ ಹೊಂಬಿಸಿಲು ಎಷ್ಟೊಂದು ಚೇತೋಹಾರಿಯೆಂಬುದನ್ನು ಅನುಭವಿಸಿಯೇ ತಿಳಿಯಬೇಕು.

## ೫. ನಾಟಕ ಸಾಹಿತ್ಯ

ಇದುವರೆಗೆ ಗೋವಿಂದ ಪೈ ಅವರ ಸಂಶೋಧನ–ಪ್ರಬಂಧ ಸಾಹಿತ್ಯದ ವ್ಯಾಪ್ತಿಯನ್ನೂ ಕ್ರಮವನ್ನೂ ಪರಿಶೀಲಿಸಿದೆವು. ಇನ್ನುಮೇಲೆ ಅವರ ಸೃಜನಶೀಲ, ಲಲಿತಸಾಹಿತ್ಯ ಪ್ರಕಟನೆಗಳಾದ ನಾಟಕ ಮತ್ತು ಕಾವ್ಯದಲ್ಲಿ ಅವರ ಕೃಷಿಯೇನಿದೆ ಎಂಬುದನ್ನು ನೋಡೋಣ. ಈ ಮೊದಲೇ ಸೂಚಿಸಿದಂತೆ, ಪೈಯವರು ತೀರ ಈಚೆಗೆ ಎಂದರೆ ೧೯೪೮ರ ಅನಂತರ ನಾಟಕ ರಚನೆಗೆ ತೊಡಗಿದರು. ಕೆಲವೇ ನಾಟಕಗಳನ್ನು ಬರೆದರು. ಅವುಗಳಲ್ಲಿ ಏಕಲವ್ಯನ ಕುರಿತಾದ 'ಹೆಬ್ಬೆರಳು' ಎಂಬ ಪದ್ಯನಾಟಕವೂ, ೧೯೪೨ರ ಚಳುವಳಿಯ ಒಂದು ಅಧ್ಯಾಯವನ್ನು

ಚಿತ್ರಿಸುವ 'ಚಿತ್ರಭಾನು' ಎಂಬ ದೊಡ್ಡ ಗದ್ಯ ನಾಟಕವೂ ಪುಸ್ತಕ ರೂಪದಲ್ಲಿ ದೊರೆಯುತ್ತವೆ. ಇವರಡಲ್ಲದೆ ಜಾಪಾನಿನ ನೋ ನಾಟಕಗಳನ್ನು (ಎಂಟು) ಅನುವಾದಿಸಿ, ಈ ವಿಶಿಷ್ಟ ನಾಟಕ ಪ್ರಕಾರದ ಪರಿಚಯ ಲೇಖನವನ್ನೂ ಬರೆದಿದ್ದಾರೆ. ಅವರ ಏಕಮೇವ ಸಾಮಾಜಿಕ ಏಕಾಂಕದ ಹೆಸರು—'ತಾಯಿ' ಎಂಬುದು.

ಹೀಗೆ ಪೈಯವರ ನಾಟಕದ ಕೃಷಿ ಮೊತ್ತದಲ್ಲಿ ಅಲ್ಪ ಪ್ರಮಾಣದ್ದಾದರೂ. ಹೆಬ್ಬೆರಳು, ಚಿತ್ರಭಾನು ಮತ್ತು ನೋ ನಾಟಕ— ಇವು ಮೂರು ಪೈಯವರು ಕನ್ನಡಕ್ಕಿತ್ತ ವಿಶಿಷ್ಟ ಕೊಡುಗೆಯಾಗಿವೆ. ಇವೆಲ್ಲವೂ ಪದ್ಯಗಂಧಿಯಾದ ನಾಟಕಗಳೇ. 'ಚಿತ್ರಭಾನು' ಗದ್ಯ ನಾಟಕದಲ್ಲಿ ಕೂಡ ಹಲವಾರು ಪದ್ಯಗಳೂ, ಪದ್ಯದ ಪ್ರವೃತ್ತಿ ಇರುವ ಕೆಲವು ಸಂಭಾಷಣೆಗಳೂ ಇವೆ. ಪದ್ಯದ ಕಡೆಗಿನ ಈ ಸಾಹಜಿಕ ಒಲಿತದಿಂದಾಗಿಯೇ ಪೈಯವರು. ಈ ನಾಟ್ಯ-ಸಂಗೀತಪ್ರಧಾನವಾದ ನೋ ನಾಟಕದತ್ತ ತಮ್ಮ ದೃಷ್ಟಿಯನ್ನು ಹರಿಯಿಸಿರಬೇಕು. ನೋ ಎಂದರೆ ಸಿದ್ಧಿ, ಸಂಪನ್ನತೆ. ಈ ನಾಟಕಗಳಲ್ಲಿ ಮೌನಕ್ಕೆ ವಿಶೇಷ ಅರ್ಥವಿದೆ. ಕಥಾವಸ್ತುವಿನಲ್ಲಿ ಕಲ್ಪಕತೆಗೇ ಪ್ರಾಧಾನ್ಯವಿರುವುದರಿಂದ ನಮ್ಮನ್ನು ಅವು ಬೇರೊಂದು ಲೋಕಕ್ಕೆ ಕರೆದೊಯ್ಯುತ್ತವೆ. ಕಥೆಯನ್ನು ನಡೆಸಿಕೊಂಡು, ಹೋಗುವ ಗೊಂದಳ ಮೇಳವು (chorus) ಗ್ರೀಕ್ ನಾಟಕಗಳಲ್ಲಿ ಕಂಡುಬರುವ ಇಂಥವೇ ಮೇಳಗಳನ್ನು ನೆನಪಿಗೆ ತರುತ್ತವೆ.

ಈ ಗೊಂದಳಮೇಳದ ತಂತ್ರವನ್ನು 'ಹೆಬ್ಬೆರಳು' ನಾಟಕದಲ್ಲಿಯೂ ಕಾಣಬಹುದು. ಇದು ಒಂದಂಕಿನ ಸರಳರಗಳೆಯ ನಾಟಕ. ಎಲ್ಲರಿಗೂ ಪರಿಚಯವಿರುವ ಏಕಲವ್ಯನ ಕಥೆ ಇದಾದರೂ, ಪೈಯವರು ಆ ಕಥೆಯಲ್ಲಿ ಆರ್ಯ-ಅನಾರ್ಯ ಭೇದದ ವಿಶೇಷ ಅರ್ಥವನ್ನು ಕಂಡಿದ್ದಾರೆ. ಏಕಲವ್ಯನು ಬೇರ್ಪಡಿಸಿಕೊಂಡ ತನ್ನ ಹೆಬ್ಬೆರಳೆಂದರೆ. ಅವನ ಕುಲವೇ ಎಂಬ ಸಾಂಕೇತಿಕ ಅರ್ಥವನ್ನು ಕೊಟ್ಟಿದ್ದುದು ಒಂದು ಮೌಲಿಕ ಅಂಶವಾಗಿದೆ. ಉಳಿದ ನಾಲ್ಕು ಬೆರಳುಗಳಿಗಿಂತ ಹೆಬ್ಬೆರಳು ಬೇರೆಯಾಗಿ ನಿಂತಿದ್ದರೂ ಕಾರ್ಯವೊಂದು ಕೈಗೂಡಬೇಕಾದರೆ ಅದರ ಸಹಕಾರ

ರದ ತುಚ್ಛೀಕರಣ, ಪ್ರೇಯಸಿಯ ಆಸೆ–ನಿರಾಸೆ ಇವುಗಳಲ್ಲಿಯ
ಘರ್ಷಣೆ ಮಾರ್ಮಿಕವಾಗಿ ಮೂಡಿದೆ. ಸಂಭಾಷಣೆಗಳಲ್ಲಿ
ಮೊನಚಿರುವುದು ಇನ್ನೊಂದು ವಿಶೇಷ. ಹೀಗಾಗಿ ನಾಟಕವು
ಅಭಿನಯಯೋಗ್ಯವಾಗಿದೆ. ಮುಖ್ಯ ಪಾತ್ರಗಳು ಜನಸಾಮಾನ್ಯ
ದಿಂದ ಬಗೆದು ಬಂದವುಗಳಾದರೂ, ಅವರ ನಡತೆ ಉದಾತ್ತ
ವಾದುದು. ನಾಯಕನ ತಂದೆ, ಪರೋಪಕಾರಿ ಹಾಗೂ ಸಮಾಜ
ಸೇವಕ. ಮಗನೂ ತನ್ನ ಜೀವನವನ್ನೆ ದೇಶಕಾರ್ಯಕ್ಕಾಗಿ ಮುಡಿ
ಪಿಟ್ಟವ. ತಾಯಿಯಂತೂ ಅನಾಥ ಹುಡುಗಿಯನ್ನು ಮನೆಯ
ಲ್ಲಿಟ್ಟುಕೊಂಡು ಪೋಷಿಸುವ ಹಾಗೂ ತನ್ನ ಮಗನನ್ನು ಕೈಯಾರೆ
ಕೊಂದವನಿಗೇ ಸಾವು ಬಂದಾಗ, 'ಅಯ್ಯೋ ಪಾಪ!' ಎಂದು
ಮರುಗುವ ಆದರ್ಶ ವಾತ್ಸಲ್ಯದ ಪ್ರತಿಮೂರ್ತಿ. ಖಳನಾಯಕ
ನಾದ ಪೋಲೀಸ ಸುಪರಿಂಟೆಂಡೆಂಟನು ಅಂದಿನ ಆಂಗ್ಲಾಧಿಕಾರದ
ರೌದ್ರ–ಕ್ರೂರತೆಗಳ ಪ್ರತಿಮೂರ್ತಿಯಾಗಿದ್ದಾನೆ.

ಪ್ರಾಸಂಗಿಕವಾಗಿ ಹೇಳಬೇಕಾದ ಒಂದು ಮಾತೆಂದರೆ, ಈ
ನಾಟಕಕ್ಕೂ ಶ್ರೀ ಕೃಷ್ಣ ಕುಮಾರರು ಬರೆದ 'ಜಾಗೃತ ರಾಷ್ಟ್ರ'ಕ್ಕೂ
ಇರುವ ಸಾಮ್ಯ. ಎರಡೂ ನಾಟಕಗಳು ಸುಮಾರು ಒಂದೇ
ಕಾಲಕ್ಕೆ ಬರೆದವುಗಳು. ಆ ನಾಟಕದಲ್ಲಿಯೂ ತಾಯಿ, ಮಗ
ಹಳ್ಳಿಯಲ್ಲಿ ಒಂದು ಅಂಗಡಿ, ಕಂದೀಲಿನ ಬೆಳಕಿನ ಸಂಕೇತದ
ಆಸರೆಯಿಂದ ನಾಯಕನು ಮನೆಗೆ ಬರುವುದು, ಮುಂದಿನ ಸುಖದ
ದಿನಗಳ ಕನಸು ಕಾಣುತ್ತಿರುವಾಗ ಪೋಲೀಸರ ಆಗಮನ. ತಾಯಿ
ಯನ್ನು ಬಂಧಿಸಿ, ದೂರವಿರಿಸಿ, ಪ್ರೇಯಸಿಗೆ, ಪ್ರಿಯಕರನ ಜೀವ
ಉಳಿಸುವ ಆಮಿಷ ತೋರಿಸಿ ಗುಟ್ಟನ್ನು ಹೊರಗೆಡಹಿ, ಆಮೇಲೆ
ಅವನನ್ನು ಕೊಂದುಬಿಡುವುದು—ಇಷ್ಟರಮಟ್ಟಿಗೆ ಸಾಮ್ಯವಿದೆ.
ಆದರೆ ಕಥೆಯ ಮುಂದಿನ ಭಾಗ, ಸಂಭಾಷಣೆ, ಪಾತ್ರಗಳ
ಪರಿಭಾವನೆ, ಈ ಅಂಶಗಳಲ್ಲಿ ಪೈಯವರ ಕೃತಿಯು ಬೇರೆ ಹಾದಿ
ಯನ್ನೆ ಹಿಡಿದಿದೆ. ಇಂಥ ಘಟನೆ ನಮ್ಮ ನಾಡಿನ ಹಲವಾರು ಊರು
ಗಳಲ್ಲಿ ನಡೆದುದೇ ಆಗಿರುವುದರಿಂದ, ಎರಡೂ ನಾಟಕಗಳ
ಕಥೆಯ ತಡಿಕೆಯಲ್ಲಿ ಸಾಮ್ಯವು ಕಂಡುಬಂದಿದ್ದರೆ, ಸಹಜವೇ ಆಗಿದೆ.

ವನ್ನೂ ಪಡೆಯುವುದು ಅನಿವಾರ್ಯವಾಗುತ್ತದೆ. ಹಾಗೆಯೇ ಭಾರತೀಯ ಜನಾಂಗವು ಏಳ್ಗೆ ಹೊಂದಬೇಕಾದರೆ, ಚಾತುರ್ವರ್ಣ್ಯಗಳೊಡನೆ ಪಂಚಮ ವರ್ಣವು ಬೆರೆಯಬೇಕು, ಉಚ್ಚ-ನೀಚ ಭೇದವಳಿಯಬೇಕು ಎಂಬ ಉದಾತ್ತ ತತ್ವದ ಪ್ರತಿಪಾದನೆಯನ್ನು ಈ ನಾಟಕದಲ್ಲಿ ಕಾಣುತ್ತೇವೆ.

## ಚಿತ್ರಭಾನು

೧೯೪೨ರ ಚಳುವಳಿಯ ಹಿನ್ನೆಲೆಯುಳ್ಳ ಈ ನಾಟಕವು ಆರೇಳು ವರ್ಷಗಳ ಅನಂತರ ಬರೆಯಲ್ಪಟ್ಟು, ೧೪ ವರ್ಷಗಳ ಅನಂತರ ಮುದ್ರಣಗೊಂಡಿತು! ನಮ್ಮ ನಾಡಿನಲ್ಲಿ ಜರುಗಿದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ವೀರನಾದೊಬ್ಬ ವಿದ್ಯಾರ್ಥಿ ಯುವಕನು, ಪೋಲೀಸರ ಗುಂಡಿಗೆ ಬಲಿಯಾದನೆಂಬ ಸಣ್ಣ ಸುದ್ದಿಯು, ಈ ನಾಟಕ ರಚನೆಗೆ ಪ್ರೇರಣೆಯಾಯಿತು.

ತಾಯಿ, ಮಗ, ಪ್ರೇಯಸಿ—ಇವರ ಚಿಕ್ಕ ಕುಟುಂಬ. ಮಗನು ಈ ಆಂದೋಲನದಲ್ಲಿ ಧುಮುಕಿದವ. ಒಂದು ರಾತ್ರಿ ತಾಯ ಮುಖ ನೋಡಲು ಬಯಸಿ, ಮನೆಗೆ ಬಂದಾಗ ಆ ಗಳಿಗೆಗೇ ಪೋಲೀಸ ಪಡೆಯ ಮೂವರು ಬಂದು, ಮುತ್ತಿಗೆ ಹಾಕುವರು. ಆ ಹುಡುಗಿಯ ಬಾಯಿಯಿಂದ ಇತರ ಆಂದೋಲನಕಾರರ ಬಗ್ಗೆ ಕೆಲ ವಿವರಗಳನ್ನು ಹೊರಡಿಸಿದ ಮೇಲೆ, ನಾಯಕನನ್ನು ಗುಂಡಿಕ್ಕಿ ಕೊಲ್ಲುವರು. ಆಗ ಪ್ರೇಯಸಿ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುವಳು. ಈ ಕಗ್ಗೊಲೆಗೆ ಕಾರಣರಾದ, ಇಬ್ಬರು ಪೋಲೀಸ್ ಅಧಿಕಾರಿಗಳೂ ವಿಧಿವಶಾತ್ ಮರಣಹೊಂದುವರು! ಹೀಗೆ ಇದೊಂದು ಅಪ್ಪಟ ದುರಂತ ನಾಟಕವಾಗಿದೆ.

ಇದರ ಕಥೆಯ ಸಂವಿಧಾನವು ಸಮರ್ಪಕವಾಗಿದ್ದು, ಒಬ್ಬ ಒಳ್ಳೆಯ ಕಾದಂಬರಿಕಾರನ ಹಾಗೆ ಪೈಯವರೂ ಕಥೆಯನ್ನು ಕುತೂಹಲ ಕೆರಳಿಸುವಂತೆ ಹೆಣೆಯಬಲ್ಲರೆಂದು ಹೇಳಬಹುದು. ತಾಯಿಯ ವಾತ್ಸಲ್ಯ-ದೇಶಪ್ರೇಮ, ಮಗನ ಸುಖದುಃಖ ವಿಚಾ

# ೬. ಪೈಯವರ ಕಾವ್ಯಸೃಷ್ಟಿ

ಪೈಯವರು ಸಂಶೋಧನ ಹಾಗೂ ಕಾವ್ಯಸೃಷ್ಟಿ ಇವೆರಡರಲ್ಲಿ ಸಮಾನ ಸಿದ್ಧಿಯನ್ನು ಪಡೆದಿದ್ದರಾದರೂ. ಕಾವ್ಯಸೃಷ್ಟಿಗೇ ಜನತೆಯಿಂದ ಹೆಚ್ಚಿನ ಗೌರವ ಸಂದಿದೆ. ಅವರ ಸಾಹಿತ್ಯ ನಿರ್ಮಿತಿಯು ಕವನದಿಂದಲೇ ಆರಂಭವಾಯಿತು. ಸರಕಾರವು ಅವರಿಗೆ ಮನ್ನಣೆಯಿತ್ತುದು ರಾಷ್ಟ್ರ 'ಕವಿ'ಯೆಂದೇ. ವಿಮರ್ಶನ ಗ್ರಂಥಗಳು ಪ್ರಕಟವಾದುದು ಅವರ ಕಾವ್ಯಗಳನ್ನು ಕುರಿತೇ, ಎಂದು ಹೇಳಬಹುದು.

ಕ್ರಿ.ಶ. ೧೯೦೦ರಿಂದ ಅವರ ಕೊನೆಗಾಲದ ವರೆಗೆ ಅವರು ರಚಿಸಿದ ಸಣ್ಣ ದೊಡ್ಡ ಕವನಗಳ ಸಂಖ್ಯೆ ೨೦೦. 'ಗಿಳಿವಿಂಡು' ಅವರ ೪೫ ಭಾವಗೀತಗಳನ್ನು ಉಲಿಯಿತು. 'ಗೊಲ್ಗೊಥಾ'. 'ವೈಶಾಖಿ'ಗಳಂತೂ ನೀಳ್ಗವಿತೆಗಳಾಗಿದ್ದು ಪುಸ್ತಕರೂಪದಲ್ಲಿ ದೊರೆತೇ ಇವೆ. ಆದರೆ 'ನಂದಾದೀಪ'—ಎಂಬ ಕವನಮಾಲಿಕೆಯ ೩೭ ಭಾವದೀಪಗಳೂ ಇನ್ನುಳಿದ ೯೫ ಕವನಗಳೂ ನಾಡಿನ ವಿವಿಧ ಪತ್ರಿಕೆಗಳ. ವಿವಿಧ ಕಾಲದ ಸಂಚಿಕೆಗಳಲ್ಲಿ ಪ್ರಕಟವಾದುವು. ಅನೇಕ ರಸಿಕ ವಿಮರ್ಶಕರು ಪೈಯವರ ಕವನಗಳ ವಿಸ್ತೃತ ವಿಮರ್ಶೆ ಮಾಡಿದ್ದನ್ನು ಲಕ್ಷಿಸಿ. ಅದರ ಪುನರುಕ್ತಿಯಾಗದಂತೆ, ಪೈಯವರ ಒಟ್ಟಿನ ಕಾವ್ಯಸೃಷ್ಟಿಯ ಪರಿಚಯವನ್ನು ಇಲ್ಲಿ ಮಾಡಿಕೊಡಬೇಕೆಂದಿದ್ದೇವೆ.

ಪೈಯವರ ಕಾವ್ಯರಚನೆಯಲ್ಲಿ ಪ್ರೇರಣೆಗಳಾವುವು? ಅವರ ಕವಿತಾ ಸಮೂಹವನ್ನು ಸಮಷ್ಟಿಯಿಂದ ನೋಡಿದಾಗ, ಭಕ್ತಿ, ಪ್ರೀತಿಭಾವ ಮತ್ತು ಜೀವನ ವಿಚಾರ—ಇವು ಮೂರು ಅಂಶಗಳು ಮುಖ್ಯ ಪ್ರಚೋದನೆಗಳಾಗಿ ನಮಗೆ ಕಂಡುಬರುತ್ತವೆ. 'ನಾನು ವಿಧಾತನ ಕೈಯಲ್ಲಿ ಒಂದು ಲೆಕ್ಕಣಿಕೆ'. 'ನಾನು ಹೆಚ್ಚಾಗಿ ಹಾಡುವುದು ನೊಂದಾಗ', 'ಅದು ಅಂತಃಸುಖಾಯವೇ ವಿನಾ ಪರರನ್ನು ಮೆಚ್ಚಿಸಲಲ್ಲ' ಎಂಬ ಅವರದೇ ನಿವೇದನೆಯಲ್ಲಿ ಮೇಲಣ ಮೂರೂ ಅಂಶಗಳ ಪ್ರಸಕ್ತಿ ಇದೆ.

# ದೈವಭಕ್ತಿ

ಭಕ್ತಿ ಭಾವನೆಯು ಪೈ ಅವರ ತರುಣ ವಯಸ್ಸಿನಲ್ಲಿಯೆ ತಲೆದೋರಿ ಆಜೀವವಾಗಿ ಅವರ ಬದುಕನ್ನು ಬೆಳಗಿಸಿದ ಒಂದು ವಿಶೇಷಾಂಶವಾಗಿದೆ. ಈ ಭಕ್ತಿಯು ದೈವಭಕ್ತಿ, ದೇಶಭಕ್ತಿ ಮತ್ತು ಗುರುಜನ ಭಕ್ತಿ ಎಂದು ಮೂರು ವಿಧವಾಗಿ ಬೆಳಗಿತು.

ಸೃಷ್ಟಿಯಲ್ಲಿಯ ಎಲ್ಲ ಚರಾಚರ ವಸ್ತುಗಳ ಆಗುಹೋಗು ಗಳೂ, ಮನುಷ್ಯನ ಪ್ರತಿಯೊಂದು ಚಲನವೂ ವಿಧಾತನ ಇಚ್ಛೆ ಯಿಂದಲೇ ನಡೆಯುವಂಥವಾಗಿವೆ; ಇಂಥ ಸರ್ವಸಮರ್ಥ, ಸರ್ವವ್ಯಾಪೀ ಪರಮಾತ್ಮನಲ್ಲಿ, ಅನನ್ಯವಾದ ಭಕ್ತಿಯನ್ನಿರಿಸಿ, ತನ್ನ ಸರ್ವಸ್ವವನ್ನೂ ಅರ್ಪಿಸಬೇಕು ಎಂಬ ನಿಶ್ಚಲ ಭಾವ ಪೈಯವರಲ್ಲಿ ಇದ್ದಿತು. ಭಕ್ತನಲ್ಲಿ ಆರ್ತಭಾವವಿರುವುದು, ಭಕ್ತಿಯ ಪ್ರಥಮ ಸೋಪಾನವಷ್ಟೆ. ಪೈಯವರು ಅದನ್ನು ದಾಟಿ, ಭಗವಂತನ ಸಾನ್ನಿಧ್ಯವನ್ನು ಅನುಭವಿಸಿದ ತೃಪ್ತಿಭಾವವನ್ನೇ ತಾಳಿ ದವರಾಗಿದ್ದರು. ಅವರ ಭಕ್ತಿಕವನಗಳಲ್ಲಿ ಇವೆರಡೂ ಹಂತ ಗಳನ್ನು ನಾವು ಕಾಣತ್ತೇವೆ.

ಅವರ ಮೊದಲ ಮುದ್ರಿತ ಪುಸ್ತಕದ ಹೆಸರೇ 'ಭಕ್ತವಾಣಿ' ಎಂಬುದು. ಅದು ಕೆಲವು ಭಕ್ತಕವಿಗಳು ನುಡಿದ ಜ್ಯೋತಿರ್ವಚನ ಗಳ ಸಂಗ್ರಹ. 'ನಂದಾದೀಪ'ದ ಕವನಗಳಂತೂ ವಿಧಾತೃವಿನ ಮುಂದೆ ಹಚ್ಚಿ ಇಟ್ಟ ದೀಪಗಳೇ ಆಗಿವೆ. ದೇವರಿಗೇನೆ ಸಮರ್ಪಣ ಮಾಡಿದ 'ಗಿಳಿವಿಂಡಿ'ನಲ್ಲಿಯ 'ವಿಶ್ವಾಂಜಲಿ', 'ಪರಮಾತ್ಮ ನೆಲ್ಲಿರುವನು?' ಹಾಗೂ 'ಜಯ ಜಯಾ' ಎಂಬ ಕವನಗಳಲ್ಲಿ ಭಕ್ತಿಭಾವವು ನಿರಾಲಂಬವಾಗಿ ಸ್ಫುರಣಗೊಂಡಿದೆ. 'ಇಂಥ ಪರಮಾತ್ಮನನ್ನು ಬಗೆಬಗೆಯಿಂದ ಆರಾಧಿಸಬೇಕು. ಆದರೆ ಹಾಗೆ 'ಆರಾಧಿಸಲರಿಯೆ, ಮಗು ತೊದಲುಲಿವೊಲು ತಾಯನು ಕರೆಯೆ ಉಲಿವೆನು' ಎಂದಿದ್ದಾರೆ ಪೈಯವರು. ಮತ್ತೊಂದು ಕವನದಲ್ಲಿ 'ಸ್ವರ್ಗ ನರಕಂಗಳಿನ್ನೆತ್ತಲೆನ್ನೊಡೆಯ? ನೀನಿಲ್ಲದಿವಮಲ್ಲಿ; ನೀನಿಲ್ಲದಲ್ಲಿ' ಎಂದು ಒಪ್ಪಿಕೊಂಡಿದ್ದಾರೆ. ಮಗುದೊಂದು ಪದ್ಯ

ದಲ್ಲಿ, 'ನಿನ್ನ ಮರೆವೊಗುವ ಬಳಿದೋರಿಸೆನಗೆರೆಯಾ' ಎಂದು ಪರಮಾತ್ಮನಲ್ಲಿ ಮೊರೆಯಿಟ್ಟಿದ್ದಾರೆ.

ಆದರೆ ಮನುಷ್ಯನು ಊರ್ಜಿತ ಸ್ಥಿತಿಯಲ್ಲಿದ್ದಾಗ ದೇವರನ್ನು ಮರೆಯುವುದುಂಟು. ಕವಿ ಅಂಥದೊಂದು 'ತಪ್ಪು' ಮಾಡಿ, ಪುನಹ ದೇವರ ಮರೆಹೊಕ್ಕ ಸಂದರ್ಭವು 'ತಿರುಕ' ಎಂಬ ಕವನದಲ್ಲಿದೆ. ತಿರುಕನೊಬ್ಬನು 'ಅಯ್ಯಾ ನಿನ್ನನ್ನು ನನಗೆ ಒಪ್ಪಿಸು' ಎಂದು ಕೇಳುವ ತೆರದಲ್ಲಿ ಒಂದೇ ಸಮನೆ ಕಾಗಿದ್ದಾನೆ. ಅವನ ನಿಜಸ್ವರೂಪವನ್ನು ತಿಳಿಯದೆ, ಕವಿ ಅವನನ್ನು ತಪ್ಪಿಸಿ ದೂರ ಹೋಗಿ ಸಮಾಧಾನಪಡುವನು. ಮುಂದೆ ಕವಿಯು ಇಳಿಗಾಲದ ಒಂದು ದಿನ ಅದೇ ತಿರುಕನು ಕಾಣಿಸಿಕೊಂಡಾಗ, ಕವಿಗೆ 'ಹಾಲುಣಿಸುವ ತಾಯಿ'ಯನ್ನು ಕಂಡಂತಾಗುತ್ತದೆ. ಆಗ 'ತಿರುಕ'ನು 'ನನ್ನನ್ನು ಹೊರಗೆ ಅಟ್ಟಿ, ನಿನ್ನನ್ನೆ ನೀನು ಹೊರಹಾಕಿಕೊಂಡಂತಾಯ್ತು! ಈಗ ನೀನು ನನ್ನನ್ನರಸಲೆಂದೆ ಬೇಡಿದ ನಿನಗಿತ್ತುದೆಲ್ಲ, ಕೊಡದ, ಕೊಟ್ಟ ಕಿತ್ತುದೆಲ್ಲವೂ ನನ್ನೊಳಿಹುದು! ನಾನೊಲ್ಲದ ಬಯಕೆ ಇಲ್ಲ. ನಾನೆ ಬಯಕೆ ಎಲ್ಲ' ಎಂದು ಹೇಳುತ್ತಾನೆ. ಎಲ್ಲವನ್ನೂ ಸೃಷ್ಟಿಸಿ, ನಮ್ಮೆಲ್ಲ ಆಗುಹೋಗುಗಳಿಗೆ ಕಾರಣನಾದ ಪರಮಾತ್ಮನಿಗೆ ನಮ್ಮನ್ನು ನಾವು ಅರ್ಪಿಸಿಕೊಳ್ಳದೆ, ಮೈಮರೆತರೆ ನಡೆದೀತೆ? ಒಮ್ಮೆಲ್ಲೊಮ್ಮೆ ಅವನಿಗೆ ಅಧೀನರಾಗಲೇಬೇಕು. ಅವನಿಗೆ ಶರಣುಹೋಗಲೇಬೇಕು—ಎಂಬ ಭಾವವು ಈ ಕವಿತೆಯಲ್ಲಿ ಮಾರ್ಮಿಕವಾಗಿ ಮೂಡಿದೆ.

ತನ್ನ ಅಂತಿಮ ಕಾಲಕ್ಕೆ ಒಮ್ಮೆಯೇ ದೇವರನ್ನು ಆರ್ತತೆಯಿಂದ ನೆನೆದ ಅಜಾಮಿಳನಿಗೆ ದೇವರು ಒಲಿದ ಕತೆ ಪುರಾಣಪ್ರಸಿದ್ಧವಾದುದು. ಎಂದರೆ ದೇವರನ್ನು ನೆನೆಯುವುದರಲ್ಲಿ ಆ ಭಾವನೆಯ ಆಳ ಹಾಗೂ ನಿಷ್ಠೆ ಮಹತ್ವದವಲ್ಲದೆ, ಅದರ ಬಾಹ್ಯರೂಪವಲ್ಲ. 'ಎಣ್ಣೆಯ ಬಟ್ಟಲು' ಎಂಬ ಕಥನಕವಿತೆಯಲ್ಲಿ ಈ ಮಾತಿನ ಸತ್ಯತೆ ಅಡಗಿದೆ. ಬೇಸಾಯಗಾರ ಗೌಡನೊಬ್ಬ ಎದ್ದಕೂಡಲೆ ಒಮ್ಮೆ, ಮಲಗುವಾಗೊಮ್ಮೆ—ಹೀಗೆ ಎರಡು ಸಲ ಮಾತ್ರ ದೇವರನ್ನು ನೆನೆಯುತ್ತಿದ್ದ. ಉಳಿದೆಲ್ಲ ವೇಳೆಯಲ್ಲಿ ಅವನಿಗೆ

ತನ್ನ ಹೊಲ ಮನೆಯ ಚಿಂತೆ. ಅದೇ, ಇಡೀ ದಿನ ದೇವರ ಧ್ಯಾನ ದಲ್ಲೇ ನಿರತನಾದ ನಾರದನು ಅವನನ್ನು ಒಬ್ಬ 'ಭವಿ' ಎಂಬುದಾಗಿ ಹೀಗಳೆದು ನುಡಿದಾಗ, ದೇವರು ನಾರದನಿಗೆ ಒಮ್ಮೆ ಒಂದು ಎಣ್ಣೆ ತುಂಬಿದ ಬಟ್ಟಲನ್ನು ಕೊಟ್ಟು, ಅದರಲ್ಲಿಯ ಎಣ್ಣೆ ಚೆಲ್ಲ ದಂತೆ, ಒಂದು ಇಡೀ ದಿನ ಸುತ್ತಾಡಿ ಬಾ—ಎಂದನಂತೆ. ನಾರ ದನು ಅದರಂತೆ ಮಾಡಿ, ಒಂದು ಹನಿ ಎಣ್ಣೆಯನ್ನೂ ಚೆಲ್ಲದೇ, ಮರಳಿ ಬಂದನು. "ಆ ಅವಧಿಯಲ್ಲಿ ನೀನೆಷ್ಟು ಸಲ ನನ್ನನ್ನು ನೆನೆದೆ" ಎಂದು ಕೇಳಿದ್ದಕ್ಕೆ "ಅದು ಹೇಗೆ ಸಾಧ್ಯ? ಒಮ್ಮೆಯೂ ಇಲ್ಲ" ಎಂದನಂತೆ, ನಾರದ! ಆಗ ದೇವರು "ಇಡೀ ದಿನ ತನ್ನ ಬೇಸಾಯದಲ್ಲೇ ತೊಡಗಿರುವ ಗೌಡನು ದಿನಕ್ಕೆ ಎರಡು ಬಾರಿ ಯಾದರೂ ನನ್ನನ್ನು ನೆನೆಯುತ್ತಾನೆ. ನಿನಗೆ ಅಷ್ಟೂ ಆಗಲಿಲ್ಲ. ಯಾರು ಭವಿ? ಯಾರ ಭಕ್ತಿ ಮೇಲು?" ಎಂದು ಕೇಳು ತ್ತಾನೆ.

ದೇವರ ಸಾನ್ನಿಧ್ಯವನ್ನು ಸದಾಕಾಲ ಅನುಭವಿಸುತ್ತಿದ್ದ ಮೂವರು ಆಳ್ವಾರರಿಗೆ, ಒಂದು ದಿನ ಮಳೆಗಾಳಿಯ ಕಗ್ಗತ್ತಲೆ ಯಲ್ಲಿ ಕೂಡ, ಭಗವಂತನು ನಾಲ್ಕನೆಯವನಾಗಿ ತಮ್ಮ ಬಳಿಯ ಲ್ಲಿದ್ದುದನ್ನು ಅವರು ಅನುಭವಿಸಿದರೆಂಬ ಭಾವವು 'ತುರೀಯ' ಎಂಬ ಕವನದಲ್ಲಿ ಬಂದಿದೆ. ದೇವನ ಇಂಥ ಸರ್ವವ್ಯಾಪೀ ಸಾನ್ನಿಧ್ಯದ ಬಗ್ಗೆ ಇರುವ ಪೈಯವರ ದೃಢವಾದ ಶ್ರದ್ಧೆಗೆ ಈ ಕವನವು ಸಾಕ್ಷಿಯಾಗಿದೆ.

ಭಕ್ತಿಯ ಪ್ರಸ್ತಾಪವಿರುವ ಪೈಯವರ ಕವಿತೆಗಳನ್ನು ಒಂದೆಡೆ ಹೀಗೆ ಕೊಡುವುದಾದರೆ, ಅವರ ಎಲ್ಲ ಕವಿತೆಗಳನ್ನು ಈ ವಿಭಾಗ ದಲ್ಲೇ ಸೇರಿಸಬೇಕಾದೀತು! ವಿಧಾತನ ಪ್ರೇರಣೆಯಿಂದಲೇ ಲೆಕ್ಕಣಿಕೆಯನ್ನೆತ್ತುವ ಅವರ, ನೂರಕ್ಕೆ ೯೦ ಪಾಲಿನ ಕವಿತೆಗಳಲ್ಲಿ ದೈವಭಕ್ತಿಯ ಅಭಿವ್ಯಕ್ತಿ ಇದ್ದೇ ಇದೆ. ಅವರ ಸಮರ್ಪಣ ಭಾವದ, ಅನನ್ಯವಾದ ಭಕ್ತಿಯ ಈ ವಿಶೇಷತೆಯಿಂದಾಗಿ ಪೈ ಯವರನ್ನು ಸಂತ, ದಾಸರ ಮಾಲಿಕೆಯಲ್ಲಿ ಗಣಿಸಬೇಕಾಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಷ್ಟರಮಟ್ಟಿಗೆ ಭಗವದ್ಭಕ್ತಿಯನ್ನು

ಹೊರಹೊಮ್ಮಿಸಿದ ಕೆಲವೇ ಕವಿಗಳಲ್ಲಿ ಪೈಯವರು ಅಗ್ರಗಣ್ಯರು.

ಪ್ರತಿಯೊಬ್ಬ ಭಕ್ತನಿಗೆ ಒಬ್ಬ ಆರಾಧ್ಯ ದೈವತ ಬೇಕು. ಗೋವಿಂದ ಪೈಯವರಿಗೆ ಶ್ರೀಕೃಷ್ಣನು ಅಂಥ ಉಪಾಸನಾ ದೇವರಾಗಿದ್ದನು. ಭಗವಂತನ ಪತ್ತು ಅವತಾರಗಳಲ್ಲಿ ವೈವಿಧ್ಯಮಯವೂ ಅಪೂರ್ವ ಘಟನೆಗಳಿಂದ ಕೂಡಿದುದೂ ಆದ ಅವತಾರವೆಂದರೆ ಕೃಷ್ಣನದೇ. ದೇವರು 'ಪರಿತ್ರಾಣಾಯ ಸಾಧೂನಾಮ್, ವಿನಾಶಾಯ ಚ ದುಷ್ಕೃತಾಮ್' ಎಂಬ ತನ್ನ ಕಾರ್ಯವನ್ನು ಈ ಅವತಾರದಲ್ಲಿ ನೆರವೇರಿಸಿದಷ್ಟು ಬೇರೆ ಅವತಾರಗಳಲ್ಲಿಲ್ಲ. ಮೇಲಾಗಿ, ಗೀತೆಯ ಮಹೋನ್ನತ ಸಂದೇಶವನ್ನು ಸಾರಿದವನು ಶ್ರೀಕೃಷ್ಣನೇ. ಇಂತು, ಶ್ರೀಕೃಷ್ಣನು ಪೈಯವರಿಗೆ ಅಚ್ಚುಮೆಚ್ಚಿನವನಾದನು. ದೇವರ ಹೆಸರನ್ನು ತೆಗೆದುಕೊಳ್ಳಬೇಕಾದ ಸಂದರ್ಭಗಳಲ್ಲೆಲ್ಲ, ಶ್ರೀಕೃಷ್ಣ, ಶ್ರೀಹರಿ ಎಂದೇ ಅವರು ಒಡನುಡಿದಿದ್ದಾರೆ. ತುರ್ಕಿಯ ಪರವಾಗಿ ಪೈಯವರು ಸಲ್ಲಿಸಿದ ಪ್ರಾರ್ಥನೆಯನ್ನು ಸ್ವೀಕರಿಸಬೇಕಾದ ದೇವರು, 'ದೇವಕೀತನಯ'ನು! ಇಂದಿನ ಯುಗದ ಧರ್ಮಗ್ಲಾನಿಯನ್ನು ಪರಿಹರಿಸಲು, ಅವತಾರಮಾಡುವುದಕ್ಕಾಗಿ ಪೈಯವರು ಶ್ರೀಕೃಷ್ಣನಿಗೇ ಮೊರೆಯಿಟ್ಟಿದ್ದಾರೆ. ಅವರ ಪತ್ನಿಯ ಹೆಸರು 'ಕೃಷ್ಣೆ' ತಾನೇ. ಅವಳಲ್ಲಿಯ ಅನುರಕ್ತಿಯ ಮೂಲಕವೆ, ಕೃಷ್ಣನಲ್ಲಿ ಭಕ್ತಿ ಎಂಬುದಾಗಿ ಹೇಳಿ, ಈ ವ್ಯಕ್ತಿದ್ವಯಕ್ಕೆ, ತಮ್ಮ ಕೃತಿಯಾದ 'ಗಿಳಿವಿಂಡ'ನ್ನು ಸಮರ್ಪಣೆಮಾಡಿದ್ದನ್ನು ಇಲ್ಲಿ ವಿಶೇಷವಾಗಿ ಗಮನಿಸಬೇಕು.

ತಮ್ಮ ಈ ಆರಾಧ್ಯಮೂರ್ತಿಯನ್ನು ಕುರಿತು ಎಷ್ಟು ಹಾಡಿದರೂ ಪೈಯವರಿಗೆ ತೃಪ್ತಿಯಿಲ್ಲ. ಕೃಷ್ಣನ ಬಾಲಲೀಲೆಗಳನ್ನು ಕುರಿತ ಅವರ ಪದ್ಯಗಳಲ್ಲಿ 'ಕಾಲಿಯಮರ್ದನ'ವನ್ನು ತಮ್ಮ ಕಾವ್ಯಾರಂಭದ ದಿನಗಳಲ್ಲಿಯೇ ಬರೆದಿದ್ದಾರೆ (೧೯೦೩). ದಾಸರ ಕೀರ್ತನೆಯ ಧಾಟಿಯಲ್ಲಿರುವ 'ನಂಬಲೆಂತು ನಿನ್ನ' ಎಂಬುದರಲ್ಲಿಯ ಬಾಲಕೃಷ್ಣನ ಲೀಲಾವಳಿಯು ಪರಿಚಿತವಾದುದೇ. ಭಕ್ತಕವಿ ಸೂರದಾಸನನ್ನನುಸರಿಸಿ, 'ಹಾಡಿ ತೂಗುವೆ ಕಂದ ಜೋಗುಳಿಸಿ ನಿನ್ನ' ಎಂದು ಹೇಳುವ 'ಯಶೋದೆಯ

ಜೋಗುಳ'ವು ಈಚೆಗೆ ಬರೆದುದೆಂದು ಕಾಣುತ್ತದೆ. ನಮಗೆ ದೊರೆತ. ಅದರ ಪ್ರಕಟನ ವರ್ಷದಿಂದ (೧೯೬೨), ಅದು ಅವರ ಕಡೆಯ ಪದ್ಯವೇನೊ ಎಂಬ ಸಂದೇಹ ಉಂಟಾಗುತ್ತದೆ.

ಕೃಷ್ಣನನ್ನು ಕುರಿತು 'ಪ್ರಭಾಸ'ವೆಂಬ ಖಂಡಕಾವ್ಯವನ್ನೆ ಬರೆಯಲು ತೊಡಗಿದ್ದರು. ದ್ವಾರಕೆಯ ಬಳಿಯ ಕಡಲಿನ ವರ್ಣನೆಯಿಂದ ಈ ಕಾವ್ಯ ಆರಂಭವಾಗುವುದರಿಂದ ಇದರ ಹರಹು ಗೊಲ್ಗೊಥಾ, ವೈಶಾಖಿಗಳಿಗಿಂತಲೂ ವಿಸ್ತಾರವಾದದ್ದಾಗಿ ತೋರುತ್ತದೆ. ಕೃಷ್ಣನ ಮೇಲೆ ಅನನ್ಯವಾದ ಒಲವು ಅವರಲ್ಲಿ ಎಂದಿನಿಂದಲೂ ಇತ್ತೆಂಬುದಕ್ಕೆ ೧೯೦೮ರಷ್ಟು ಹಿಂದೆಯೇ ನವೀನ ಚಂದ್ರಸೇನರ ಮಹಾಕಾವ್ಯದಿಂದ ಗದ್ಯಾನುವಾದಗೊಂಡ, 'ಶ್ರೀ ಕೃಷ್ಣಚರಿತೆ' ಪುಸ್ತಕವು ಗಮನಾರ್ಹವಾಗಿದೆ.

ಪೈಯವರು ಶ್ರೀಕೃಷ್ಣನನ್ನು ಯೇಸುವಿಗೆ ಹೋಲಿಸಿದುದು ಒಂದು ವಿಶೇಷ ಸಂಗತಿ. ಅವರಿಬ್ಬರ ಜನನ, ಕೆಲವು ಜೀವನ ಪ್ರಸಂಗಗಳು, ಮರಣ—ಇವುಗಳಲ್ಲಿಯ ಸಾಮ್ಯಗಳನ್ನು ಕೊಟ್ಟು ಕೊನೆಯಲ್ಲಿ 'ಯದುನಾಥನೆ ಯೂದನಾಥನಲ್ಲವೆ' ಎಂದು ಸಮಾರೋಪ ಮಾಡಿದ್ದಾರೆ. ಪಂಪರನ್ನರು ತಂತಮ್ಮ ಕಥಾನಾಯಕ–ಪೋಷಕ ದೊರೆಗಳಲ್ಲಿ ಅಭೇದವನ್ನು ಕಲ್ಪಿಸಿ ವರ್ಣಿಸಿದ ಚಮತ್ಕಾರವನ್ನು ಪೈಯವರು ಇಲ್ಲಿ ಅನುಸರಿಸಿರಬೇಕು. ಯೇಸು ಮತ್ತು ಕೃಷ್ಣರಲ್ಲಿ ಮೇಲುನೋಟಕ್ಕೆ ಸಾಮ್ಯವೇನೂ ಕಂಡುಬರುವುದಿಲ್ಲ. ಆದರೂ ಪೈಯವರು ಹಾಗೆ ಏಕೀಕರಿಸಿ ಹೇಳುವುದರ ಹಿನ್ನೆಲೆಯನ್ನು ಹೀಗೆ ವಿವರಿಸಬಹುದು: 'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್' ಎಂಬ ಗೀತಾವಾಣಿಯನ್ನು ಪೈಯವರು

ಎಂದೆಂದಿಗೆ ಧರ್ಮ ಕುಂದಿ ಬಂದವು-
ದಧರ್ಮ ಮುಂದುವರಿದಂದು
ಬಂದಪೆನೊಡಲಾಂತೆಂದಿಹೆ

ಎಂಬುದಾಗಿ, ಈ ಕವನದಲ್ಲಿಯೆ ಅನುವಾದಿಸಿ ಕೊಟ್ಟಿದ್ದಾರಷ್ಟೆ. ಕೃಷ್ಣ. ಬೌದ್ಧರ ಅವತಾರಗಳಾದ ಮೇಲೆ ಭಗವಂತನು ಈ ಯೇಸುವಿನ ಅವತಾರವನ್ನು ತಾಳಿದನೆಂದು ಅವರು ಈ ಅಭೇದ ಚಿತ್ರಣದ ಮೂಲಕ ಸೂಚಿಸಿದ್ದಾರೆ. ಜೊತೆಗೆ 'ದಿನವೆರಡರ ಭಾಸ್ಕರನೆರಡಹನೆ? ಇನ್ನಲಿ ಭೇದ ಬಗೆಯಬಹುದೆ?' ಎಂಬ ಚರಣಗಳಲ್ಲಿ ಅದಕ್ಕೆ ಪುಷ್ಟಿ ದೊರೆಯುತ್ತದೆ. 'ಸರ್ವಧರ್ಮ ಸಮನ್ವಯಿಗಳಾದ ಪೈಯವರು ಇಂಥ ಪುರೋಗಾಮಿ ಅಭಿಪ್ರಾಯವನ್ನು ತಾಳಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಇನ್ನು ಸಾಮ್ಯದ ಅಂಶಗಳು: ಕೃಷ್ಣನಂತೆ ಯೇಸುವೂ ಧರ್ಮವನ್ನು ನೆಲೆಗೊಳಿಸಲಿಕ್ಕೆಂದೇ ತನ್ನ ಜೀವನವನ್ನು ಧಾರೆಯೆರೆದನು. ಕೃಷ್ಣನ ದುಷ್ಟನಿಗ್ರಹದ ಕಾರ್ಯಕ್ಕಿಂತ ಅವನ ಶಿಷ್ಟರಕ್ಷಣೆ ಮತ್ತು ಶಿಷ್ಯವಾತ್ಸಲ್ಯ—ಈ ಅಂಶಗಳಲ್ಲಿ ಪೈಯವರು ಹೆಚ್ಚಿನ ಹೋಲಿಕೆಗಳನ್ನು ಕಂಡರು. ಅವರಲ್ಲಿ ಅಭೇದ ವರ್ಣನೆ ಮಾಡುವಾಗ ಅಂಥ ಪ್ರಸಂಗಗಳನ್ನೆ ಆಯ್ದುಕೊಂಡರು.

## ದೇಶಭಕ್ತಿ

ದೇವರ ಅನಂತರ, ಪೈಯವರ ಜೀವನ ವಿಚಾರಗಳಲ್ಲಿ ವಿಶೇಷ ಮಹತ್ವವನ್ನು ಪಡೆದ ಅಂಶವೆಂದರೆ ತಾಯ್ನಾಡು. ಅವರ ದೇಶಭಕ್ತಿಯು ಹಲವಾರು ಕವನಗಳಲ್ಲಿ ಉಜ್ವಲವಾಗಿ ಹೊರಹೊಮ್ಮಿದೆ.

ಮನುಷ್ಯನನ್ನು ಹುಟ್ಟಿಸುತ್ತಲೆ ದೇವರು ಅವನಿಗೆ ಎರಡು ವರಗಳನ್ನಿತ್ತನಂತೆ (ಕೈಕಯಿಗೆ ದಶರಥನಿತ್ತಂತೆ). ಅವೇ ದೇಶ ಮತ್ತು ಧರ್ಮಗಳ ರಕ್ಷಣೆ! ಎಂದರೆ ದೇಶ ರಕ್ಷಣೆಯು ಬಾಧ್ಯತೆಯು ಅಥವಾ ಕರ್ತವ್ಯದ ವಿಷಯವಲ್ಲ. ಅದು ಮನುಷ್ಯನ ಪಾಲಿಗೆ ಒಂದು ವರ! ಅದೊಂದು ಪುಣ್ಯದ ಕೆಲಸ! ಪೈಯವರ ದೇಶಸೇವೆಯ ಕಲ್ಪನೆಯು ಹೀಗೆ ಉನ್ನತವಾಗಿದ್ದಿತು.

ಈ ಪುಣ್ಯದ ಕೆಲಸವನ್ನು ನೆರವೇರಿಸಲು ವಿಜಯನಗರ ಕಾಲದ ಒಬ್ಬ ಸೈನಿಕನು ತಪ್ಪಿದನಂತೆ. ಅದಕ್ಕಾಗಿ ಅವನ ಹೆಂಡತಿಯು

ಪ್ರಾಯಶ್ಚಿತ್ತ ಮಾಡಿಕೊಂಡ ವಿಶಿಷ್ಟ ಸನ್ನಿವೇಶವು 'ಹಳ್ಳಿಯ ಹುಡುಗಿ' ಎಂಬ ಕವನದಲ್ಲಿ ಇದೆ. ತಾಳೀಕೋಟೆಯ ಭೀಕರ ಕಾಳಗದಲ್ಲಿ ಆ ಸೈನಿಕನು ಸೋತು ರಣದಲ್ಲಿಯೇ ವೀರಸ್ವರ್ಗ ವನ್ನು ಪಡೆಯದೆ ಹಿಂತಿರುಗಿ ಬಂದನು. ದೇವರಿತ್ತ 'ವರ'ದ ದುರುಪಯೋಗ ಮಾಡಿದನು. ಅದರಿಂದ ಕನಲಿದ ಅವನ ಹೆಂಡತಿಯು ಮನೆಬಿಟ್ಟು ಹೊರಟಳು. ದಾರಿಯಲ್ಲಿ ಓರ್ವ ಅನಾಥ ಸ್ತ್ರೀಯ ಮೇಲೆ ಬಲಾತ್ಕಾರವೆಸಗುತ್ತಿದ್ದ ವಿಧರ್ಮಿಯ ನನ್ನು ಕೊಂದು, ಕೊನೆಗೆ ತನ್ನ ಅಸುವನ್ನು ನೀಗಿದಳು. ಹೀಗೆ, ಗಂಡನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಳಲ್ಲದೆ, ದೇಶ, ಧರ್ಮರಕ್ಷಣೆಯ ಕಾರ್ಯವನ್ನೂ ನೆರವೇರಿಸಿದಳು.

ತಾಯ್ನಾಡಿನ ಮಹಿಮೆಯನ್ನು ನೇರವಾಗಿ ಹೇಳುವ ಪೈಯವರ ಪದ್ಯಗಳನ್ನು ಪರಿಶೀಲಿಸೋಣ. ತುಳುನಾಡಿನಲ್ಲಿ ಜನ್ಮವೆತ್ತಿದ ಅವರು, ಅದರ ಇತಿಹಾಸ, ಕಲೆಗಳನ್ನು ಅಭ್ಯಸಿಸಿದ ಮೇಲೆ ನಾಡ ಪ್ರೇಮವು ಉಕ್ಕಿಬಂದು. ಆ 'ತೌಳವ ಮಾತೆ'ಯನ್ನು ಬಾಯ್ತುಂಬ ಹೊಗಳಿದರು. ತಮ್ಮ ಪೂರ್ವಿಕರ ನೆಲೆವೀಡಾಗಿದ್ದ ಗೋವೆ ಯನ್ನು ಕುರಿತೂ ಅವರು ತಮ್ಮ ಆದರಾಂಜಲಿಯನ್ನು ಅರ್ಪಿಸಿ ದ್ದಾರೆ (ಗೋಯಾಚೆ ಗೀತ). 'ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೇ' ಎಂದು ನುಡಿಯಿಸಿದ ಪದ್ಯದಲ್ಲಂತೂ ಮಾತೃಭೂಮಿಯ ವಿಷಯಕವಾದ ಅವರ ಶ್ರದ್ಧೆಯು ಪರಾಕಾಷ್ಠೆ ಯನ್ನು ಮುಟ್ಟಿದೆ. 'ವಿರಾಟರಾಯನ ಕಾಲದ ಕನ್ನಡನಾಡಿನ ಗೊಂದಳವಾಡು' ಎಂಬ ಸಮೂಹಗೀತದಲ್ಲಿಯೂ ಕನ್ನಡ ನಾಡನ್ನು ಕುರಿತ ಕೆಲವು ಮನನೀಯ ಮಾತುಗಳಿವೆ.

ಇವಳಿಗಿಂತ ದೊಡ್ಡ ತಾಯಿ—ಭಾರತೀ. ಪೈಯವರಲ್ಲಿ ಅಖಿಲ ಭಾರತ ಭಾವನೆಯು. ಅಖಂಡವಾಗಿ, ಏಕಪ್ರಕಾರವಾಗಿ ಇದ್ದಿತು. ೧೯೧೧ರಷ್ಟು ಹಿಂದೆಯೇ ಅವರು ಕವಿ ರವೀಂದ್ರರ 'ಭಾರತ ಲಕ್ಷ್ಮೀ' ಎಂಬ ಕವನವನ್ನು ಅನುವಾದ ಮಾಡಿದ್ದರು. ಅದೇ ಭಾವನೆಯಿಂದ ಪ್ರೇರಿತರಾಗಿ, ಅವರು ಅನುವಾದಿಸಿದ ಇನ್ನೊಂದು ಕವನವೆಂದರೆ, ಮಹಮ್ಮದ ಇಕ್ಬಾಲ್ ವಿರಚಿತ

'ಹಿಂದೂಸ್ತಾನ್ ಹಮಾರಾ' ಅರ್ಥಾತ್ 'ನಮ್ಮವಳೀ ಭಾರತ ಜನನೀ' ಎಂಬುದು. ಮೂಲ ಉರ್ದು ಪದ್ಯವನ್ನು ಇಂಗ್ಲಿಷ್‌ನಲ್ಲಿಯೂ ಅವರು ಭಾಷಾಂತರ ಮಾಡಿದರು. 'ಭಾರತಾಂಬೆಯ ಮಹಿಮೆ' ಎಂಬ ತಮ್ಮದೇ ಆದ ಕವನದಲ್ಲಿ 'ಭಾರತವನಾಳಿಯುತ್ತ ನನಗೆ ಜೀವನವಿತ್ತ...ಭಾರತಾಂಬೆಯ ಭಕ್ತಿ ನನಗಾತ್ಮ ಶಕ್ತಿ' ಎಂಬುದಾಗಿ ತಮ್ಮ ಬದುಕಿನ ಮುಖ್ಯ ನಿಲುವೊಂದನ್ನು ಸಮರ್ಥಿಸಿಕೊಂಡಿದ್ದಾರೆ.

ದೇಶದ ಸ್ವಾತಂತ್ರ್ಯಾಂದೋಲನದಲ್ಲಿ ಗಾಂಧೀಜಿಯವರು ಧುಮುಕಿದಂದಿನಿಂದ ಆಂದೋಲನವು ಬೃಹತ್ ಸ್ವರೂಪವನ್ನು ತಾಳಿತಷ್ಟೆ. ದೇಶವತ್ಸಲರಾದ ಪೈಯವರು. ಆ ಕಾಲದ ಕೆಲವು ಕವಿತೆಗಳ ಮೂಲಕ ತಮ್ಮ ಸ್ವಾತಂತ್ರ್ಯ ದಾಹವನ್ನು ವ್ಯಕ್ತಪಡಿಸಿದರು. 'ತುತೂರಿ' ಎಂಬ ಪದ್ಯದಲ್ಲಿ ಗಾಂಧೀಜಿಯವರ ಹೋರಾಟದ ಕರೆಗೆ ಓಗೊಟ್ಟುದನ್ನು ನಾವು ಕಾಣುತ್ತೇವೆ. ಇದರಲ್ಲಿಯು ಮೂಲಭಾವವು ಮರಾಠೀ ಕವಿ ಕೇಶವಸುತರದಾದರೂ, ಈ ನೀಳ್ಗವನದಲ್ಲಿ ಪೈಯವರು ಅನೇಕ ಹೊಸ ಅಂಶಗಳನ್ನು ಸೇರಿಸಿದ್ದಾರೆ. ಅಂದಿನ ಭಾರತೀಯನ ಕರ್ತವ್ಯವೇನೆಂಬುದನ್ನು ಸ್ಪಷ್ಟವಾಗಿ ಸಾರಿ ಹೋರಾಟದ ಕಹಳೆಯನ್ನೆ ಊದಿದ್ದಾರೆ.

ಕಹಳೆ! ಹೌದು. 'ಕಾಣೆ ಕತ್ತಿ'. 'ಕಾದಿಸೆ ಕಹಳೆ'. ಜನತೆಯ ಔದಾಸೀನ್ಯವನ್ನು ಹೋಗಲಾಡಿಸಲು. ಬೃಹನ್ನಳೆಯಾಗಿದ್ದ ಭಾರತೀಯನನ್ನು ಅರ್ಜುನನನ್ನಾಗಿ ಮಾಡಲು ತುತೂರಿಯೇ ಉತ್ತಮ ಸಾಧನ. ಈ ಕವನದಲ್ಲಿ ಪೈಯವರು ಮೊದಲಿಗೆ, ಹಳತು ಹೊಸತು ಇವುಗಳ ಹೆಸರಿನಲ್ಲಿ ಜಗಳ ಬೇಡ ಎಂದು ಹೇಳಿ, ಹಳತಿನ ಒಳ್ಳೆಯ ಅಂಶಗಳನ್ನು ಸ್ವೀಕರಿಸಿ, ಹೊಸ ಹಾದಿಯಲ್ಲಿ ಸಾಗಬೇಕು; ಕಾರ್ಯಪ್ರವೃತ್ತರಾಗಬೇಕು. 'ತಮಗೆ ತಾವು ಎನದೆ' ಕಾಣನೆ ದೇವಂ' (ನಾಯಮಾತ್ಮಾ ಬಲಹೀನೇನ ಲಭ್ಯಃ) ಎಂಬುದಾಗಿ ಎಚ್ಚರಿಕೆಯನ್ನಿತ್ತಿದ್ದಾರೆ. ಅಲ್ಲಿಂದ ದೇಶದ ಸ್ಥಿತಿ ನೋಡಿ ಮರುಗಿ. ಅದು ಛಿದ್ರಗಳಿಂದ ಕೂಡಿರುವುದಕ್ಕಾಗಿ ಪರಿತಪಿಸಿ. 'ದೇವರೊಬ್ಬನೀ ಸೃಷ್ಟಿಯ ತಂದೆ. ಮನುಜವಂಶವೊಂದೆ ಕುಟುಂಬ

ಪೊಂದೆ. ಹೆತ್ತ ತಾಯಿ ಇಳೆಯೆ ತಾಯಿ ಎಮಗೆಂದೆ' ಎಂಬುದಾಗಿ ನಾವು ಭಾವಿಸಬೇಕು. ನಾವೆಲ್ಲ ಒಂದಾಗಬೇಕು. ಅದೇ ಭವಿಷ್ಯದ ಧರ್ಮ—ಎಂದು ಸಾರಿದ್ದಾರೆ. 'ಬಿಡದೆ ಕಾದುವುದೆ ನಿಮ್ಮಯ ಗೊಡವೆ ಜಯಾಜಯಂ ದೇವರ ಕೆಯ್ಗೊಡವೆ...ಜಯವೆ ಶಾಂತಿ! ವಿಜಯವೆ ವಿಶ್ರಾಂತಿ!' ಎಂಬ ಉದ್ಘೋಷದಿಂದ ಈ ಕವನವು ಮುಕ್ತಾಯವಾಗುತ್ತದೆ. ಒಟ್ಟಿನಲ್ಲಿ, ಈ ಪದ್ಯವು ಭಗವದ್ಗೀತೆಯ 'ಕರ್ಮಣ್ಯೇವಾಧಿಕಾರಸ್ತೇ' ಸಂದೇಶದ ಸಾರದಂತಿದೆ.

'ಬಿಡದೆ ಕಾದುವುದೆ ನಿಮ್ಮಯ ಗೊಡವೆ; ಜಯಾಜಯಂ ದೇವರ ಕೆಯ್ಗೊಡವೆ' ಎಂಬ ಭಾವವೇ ಅವರ ಸುಪ್ರಸಿದ್ಧ 'ಕೊಳುಗುಳದ ಮನವಿ' ಎಂಬ ಪದ್ಯದಲ್ಲಿ ಪರಿಪೂರ್ಣವಾಗಿ ಅರಳಿದೆ. 'ತುತೂರಿ'ಯಲ್ಲಿ ಯೋಧನಿಗೆ ಹೋರಾಟಕ್ಕಾಗಿ ಕರೆ ಇದ್ದರೆ, ಇಲ್ಲಿ ಆತನು ಯುದ್ಧರಂಗಕ್ಕೆ ಬಂದುಬಿಟ್ಟಿದ್ದಾನೆ. ಅವನು ದೇವರ ಹೆಸರಿನಿಂದಲೆ ಧರ್ಮಯುದ್ಧದಲ್ಲಿ ನಿರತನಾಗಿದ್ದಾನೆ; 'ಸ್ವರಾಜ್ಯವರ್ಜ್ಯ'ವಾದ ತಾಯ್ನಾಡಿನ ಬಿಡುಗಡೆಗಾಗಿ ರಣದೀಕ್ಷೆಯನ್ನು ಕೊಡು ಎಂದು ದೇವರನ್ನು ಕೇಳುತ್ತಿದ್ದಾನೆ. ಅವನಿಗೆ ಗೆಲವು, ಮರಣಗಳು ಎರಡೂ ಒಂದೇ. ಧರ್ಮಯುದ್ಧದಲ್ಲಿ ಅವನಿಗೆ ಸೋಲೆಂಬುದೇ ಇಲ್ಲ. ಇನ್ನು, ವಿಜಯವನ್ನು ಪಡೆಯದೇ ತಾನು ಸತ್ತರೂ ದೇವರು ಯುದ್ಧವನ್ನು ಹೇಗೂ ಮುನ್ನಡೆಸುತ್ತಾನೆ. 'ಆ ಮುನ್ನಡೆದ ಯುದ್ಧದಲ್ಲಿ ಮತ್ತೆ ಭಾಗವಹಿಸುವಂತೆ ನನಗೆ ಪುನರ್ಜನ್ಮವನ್ನು ಕೊಡು' ಎಂಬುದು ಆ ಯೋಧನ ಮನವಿ. ಜನ್ಮಾಂತರ ಕರ್ಮದಲ್ಲಿ ಅವಿಚ್ಛಿನ್ನ ನಂಬುಗೆಯನ್ನಿಟ್ಟಿದ್ದ ಪೈಯವರು 'ಜನಿತ ವ್ಯಕ್ತಿ ಮಡಿಯೆ, ಅನುರಕ್ತಿ ಮಡಿವುದೆ?' ಎಂದು ಕೇಳಿದ್ದಾರೆ. 'ತುತೂರಿ'ಯಂತೆ, ಈ ಪದ್ಯದ ಮೂಲ ಭಾವವೂ ಅನ್ಯ ಭಾಷೆಯಿಂದ (ಜರ್ಮನ್) ಬಂದುದಾದರೂ ಪೈಯವರು ಮೂಲದ ವಿಚಾರಗಳನ್ನು ಹಿಗ್ಗಿಸಿದ್ದಾರೆ. ಮೇಲೆ ಕೊಟ್ಟ ಪುನರ್ಜನ್ಮದ ಆಶಯದಿಂದ ಮೂಲ ಭಾವವನ್ನು ಇನ್ನಷ್ಟು ಉದಾತ್ತಗೊಳಿಸಿದ್ದಾರೆ.

ವರುಷಗಳುರುಳಿದಂತೆ ಪೈಯವರ ಸ್ವಾತಂತ್ರ್ಯದ ಹಂಬಲ

ಹಿರಿದಾಯಿತು. ಬ್ರಿಟಿಷರು ಕಾಲ್ತೆಗೆಯುವ ಕಾಲವು ಸನ್ನಿಹಿತವಾದಂದಿನ ೨ ವರ್ಷಗಳ ಅವಧಿಯಲ್ಲಿ (೧೯೪೬–'೪೭) ಅವರ ಕವಿಚೇತನವು ಚಿಮ್ಮಿ ನೆಗೆದಾಡಿತು. ಆಗಿನ ಅವರ ಸಂಭ್ರಮವನ್ನು ನಾವು ಹಲವು ಪದ್ಯಗಳಲ್ಲಿ ಕಾಣುತ್ತೇವೆ. ಪೈ ಅವರ ದೃಷ್ಟಿಯಲ್ಲಿ 'ಕ್ವಿಟ್ ಇಂಡಿಯಾ' ಇದು ಭಾರತ ಸ್ವಾತಂತ್ರ್ಯದ ಗಾಯತ್ರೀ ಮಂತ್ರವಾಗಿದ್ದಿತು. 'ಬಿಡುಗಡೆಯ ದೇವರಿನಣಂ ಕಿರಿಯ ದೇವತೆಯೆ?' ಈ ಬಿಡುಗಡೆಯ ರೂಪದಲ್ಲಿ ಸ್ವಾತಂತ್ರ್ಯ ಸೂರ್ಯನು ಭಾರತವನ್ನು ಬೇಗ ಬೆಳಗಲಿ ಎಂಬುದಾಗಿ ಅವರು ಮನಸ್ವೀ ಹಾರೈಸಿದರು. ಕೊನೆಗೊಮ್ಮೆ ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವಾಗಿನ ಅವರ ಮನಸ್ಥಿತಿಯನ್ನು 'ಒಲ್ಲದ ಕೊಡಿಗೆ' ಎಂಬ ಕವನದಲ್ಲಿ ಮೂಡಿಸಿದರು. ನಮ್ಮ ದೇಶದ ಬಿಡುಗಡೆಯೆಂಬುದು ಆಂಗ್ಲರಿಗೆ ಒತ್ತಾಯದ ಒಲ್ಲದ ಕೊಡಿಗೆಯೇ ತಾನೆ. ಮತ್ತೊಂದು ಪದ್ಯದಲ್ಲಿ ಪೈಯವರು 'ಭಾರತ ಧ್ವಜ'ವನ್ನು ಬಣ್ಣಿಸುತ್ತ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ನಾಡಬಾಂಧವರಿಗೆ ಕರೆ ಇತ್ತರು. 'ಇನ್ನು ಹೆರವರ ನೊಗಕೆ ಮಣಿವರಾವಲ್ಲ. ನಡೆ ಮುಂದೆ ಸೈ ಸೈ. ಜಯ ಹಿಂದ್...ಜೈ ಜೈ' ಎಂಬುದಾಗಿ ಜಯಘೋಷ ಮಾಡಿದರು. ಇವೆಲ್ಲ ಕವಿತೆಗಳು ಪೈಯವರ ಆತ್ಯಂತಿಕ ದೇಶಭಕ್ತಿಯನ್ನು ತೋರಿಸಿಕೊಡುತ್ತವೆ. ಮೂರು ದಶಕಗಳಿಂದ ದೇಶದ ಸ್ವಾತಂತ್ರ್ಯದ ಜಪವನ್ನು ಮಾಡುತ್ತಿದ್ದ ಪೈಯವರಿಗೆ ಅದು ಕೈಗೂಡಿದಾಗ ಆದ ಸಂತೋಷ ಅಷ್ಟಿಷ್ಟಲ್ಲ.

ಆದರೆ ಮುಂದಣ ಎರಡು ವರ್ಷಗಳಲ್ಲಿಯೆ ಪೈಯವರ ಭ್ರಮನಿರಸನವಾಯಿತು. ಸ್ವಾತಂತ್ರ್ಯದೊಡನೆ ಜನತೆಗೆ ಸುಖ, ಶಾಂತಿ, ಸಮೃದ್ಧಿಗಳು ಲಭಿಸುವುವೆಂದು ಎಲ್ಲರಂತೆ ಪೈಯವರೂ ನೆರೆನಂಬಿದಾಗ, ಅನಂತರದ ವರ್ಷಗಳಲ್ಲಿ ಏನಾಯಿತು ಎಂಬುದನ್ನು ನೋಡಿ ಪೈಯವರ ನಿಷ್ಪಾಪದ ಮನಸ್ಸು ನಿರಾಶೆಯಿಂದ ನೊಂದಿತು. ಈ ನಿರಾಶೆ, ಸಂತಾಪಗಳು ದುಸ್ಸಹವಾಗತೊಡಗಿದಾಗ, ದೇವನಲ್ಲಿ ಆರ್ತವಾದ ಮೊರೆಯಿಟ್ಟರು.

ಪೈಯವರ ಈ ಮನೋಭೂಮಿಕೆಯನ್ನು ನಿದರ್ಶಿಸುವ

ಮೊದಲ ಪದ್ಯವೆಂದರೆ 'ಮಾತೃಭೂಮೀಶ್ವರಾಷ್ಟಕ' ಎಂಬುದು (೧೯೪೯). ಅದರಲ್ಲಿ ಮೊದಲಿಗೆ ಭಾರತದಲ್ಲಿ, 'ಹಿಂದೂಧರ್ಮ ದಲ್ಲಿ ನನ್ನನ್ನು ಹುಟ್ಟಿಸು; ನನಗೆ ಐಶ್ವರ್ಯ, ಕೀರ್ತಿ, ಮೋಕ್ಷ— ಯಾವುದೂ ಬೇಡ' ಎಂದು ಕೇಳಿ, ಮುಂದೆ 'ನೀರಡಿಸಿದವನಿಗೆ ಬೆಲ್ಲವನ್ನು ಕೊಟ್ಟರೆ ಸಾಲದು. ಮುಖ್ಯವಾದದ್ದು, ಅಗತ್ಯ ವಾದದ್ದು ಕುಡಿಯಲು ನೀರು! ಜನತೆಗೆ ಶಾಂತಿ, ಸುಖಗಳು ಲಭಿಸದಿದ್ದರೆ, ಬರಿ ರಾಜಕೀಯ ಸ್ವಾತಂತ್ರ್ಯದಿಂದಾವ ಪ್ರಯೋ ಜನ?' ಎಂದು ಮನವಿ ಮಾಡಿದ್ದಾರೆ.

ಸ್ವಾತಂತ್ರ್ಯ ಅಥವಾ ಗಣರಾಜ್ಯ ಇವುಗಳ ದಿನಾಚರಣೆಯ ಕಾಲಕ್ಕೆ ವಿಶೇಷ ಸಂಚಿಕೆಗಳನ್ನು ಹೊರಡಿಸುತ್ತಿದ್ದ ಕೆಲವು ಪತ್ರಿಕೆ ಗಳ ಕೇಳಿಕೆಯಿಂದಾಗಿ ಬರೆದ ಹಲವು ಕವಿತೆಗಳಲ್ಲಿ, ಪೈಯವರು ಭಾರತದ ಪರಿಸ್ಥಿತಿಯ ಬಗ್ಗೆ ತಮ್ಮ ನಿರಾಶೆಯನ್ನು ತೋಡಿ ಕೊಂಡು ದೇವರಲ್ಲಿ ಪ್ರತಿವರ್ಷವೂ ಮೊರೆಯಿಟ್ಟರು. ತೃತೀಯ ಸ್ವಾತಂತ್ರ್ಯ ದಿನಾಚರಣೆ ಬಂದಿತು. 'ವರುಷವೆರಡಾಯಿತು ನೀನೆಮಗೆ ಸ್ವಾತಂತ್ರ್ಯ ನೀಡಿ' ಎಂದು ದೇವರ ಗಮನವನ್ನು ಸೆಳೆದು, ದೇಶಕ್ಕೆ ಸುಖಸಂಪದಗಳನ್ನು ಕೊಡು ಎಂದರು. ಅದರ ಮರುವರುಷ ಗಣರಾಜ್ಯ ಸ್ಥಾಪನೆಯಾದ ಮೇಲೆ, ದೇಶದ ದುಸ್ಥಿತಿಯನ್ನು ವಿವರಿಸಿ "ಒಡೆಯಾ, ಸುಸ್ಥಿಗೆ ನಾವು ಅನರ್ಹ ರೆಂದು ನಿನ್ನ ಭಾವನೆಯೇನೊ. ಆದರೆ ನಮ್ಮ ಹಿರಿಯರ ಪುಣ್ಯ ವನ್ನಾದರೂ ನೆನೆದು ನಮಗೆ ಸುಖವನ್ನು ಕೊಡು" ಎಂದು ಕೇಳಿಕೊಂಡರು.

ಮುಂದೊಂದು ವರುಷ (೧೯೫೨) 'ಕೊಡುವಿಯಾ, ಒಳಿತೆ ಕೊಡು? ಕೊಡೆಯ? ನೀ ಕೊಡಬೇಡ' ಎನ್ನುವ ಬೇಡಿಕೆಯನ್ನು ದೇವರ ಮುಂದಿರಿಸಿದರು. 'ಭಾರತಕ್ಕೆ ಬಿಡುಗಡೆಯನಿತ್ತೆ; ಮತ್ತೆ ಕೈಬಿಟ್ಟೆ! ಅನಂತರ ಐಕ್ಯ ಶಾಂತಿಗಳಿಲ್ಲ. ನಮ್ಮ ತೃಷೆಗೆ ನೀನು ಎರೆದ ನೀರು ಉಪ್ಪಾದುದಲ್ಲ! ಕೋಟಿ ಹಣ ನೀರಾಗೆ ನೂಲಿಲ್ಲ, ಅಗುಳಿಲ್ಲ, ಹೊರಗೆ ಕೀರ್ತಿಯ ಸೌಧ, ಮನೆ ಹೊದಿಕೆ ತೂತು!" ಎಂಬುದಾಗಿ ಹಲುಬಿದರು. ಮರುವರುಷದ ಗಣ

ರಾಜ್ಯ ದಿನಾಚರಣೆಯ ಸಂದರ್ಭದಲ್ಲಿ ಬರೆದ 'ನವಯುಗದ ಮನವಿ' ಎಂಬ ಕವನದಲ್ಲಿ ಇದೇ ಆಶಯ ವ್ಯಕ್ತವಾಗಿದೆ.

ಇಂಥ ಸಂದರ್ಭಗಳಲ್ಲಿ ಸಾಮಾನ್ಯವಾಗಿ ದೇವರಲ್ಲಿಯೆ ಮೊರೆಯಿಡುವ ಪೈಯವರು ವರುಷ ಹತ್ತು ಉರುಳಿದಾಗ ರಾಷ್ಟ್ರಪಿತ ಗಾಂಧೀಜಿಯಲ್ಲಿ ತನ್ನ ಅಳಲನ್ನು ತೋಡಿಕೊಂಡರು: 'ಅದಕ್ಷತೆಯ ನಿರಂಕುಶತೆಯಾಳ್ವನದ ದುಂದು ಜನತೆಯ ತಿರಸ್ಕಾರ, ಚೆನ್ನುರಿವ ಸುಂಕ ಹೊಟ್ಟೆಬಟ್ಟೆಯ ಹಸಿವೆ ದಿಗ್ಭಾಗಿಯೆ ಮನನೊಂದು ಕಾವೆ ವಿಶ್ವಂದಮಿದೂ ಇವರ ಕೊನೆಯಂಕ! ನೀರಿಳಿವ ಎಳೆನಂತೆಮಗೆ ಶಾಂತಿ ಶೂನ್ಯ ಸತ್ತ್ವ ಗಡ ಬದುಕಿದಿ ಮಹಾತ್ಮ ನೀ ಧನ್ಯ!' ಎಂದು. 'ಇನ್ನಿನಿತು ನೀ ಮಹಾತ್ಮಾ ಬದುಕಬೇಕಿತ್ತು: ಈಗ ಭಾರತಗಾತ್ರವಿದೆ ನಿನ್ನ' ಎಂದು ೧೯೪೮ರಲ್ಲಿ ಪೈಯವರು ಆಶಿಸಿದ್ದರು. ಹತ್ತು ವರ್ಷಗಳ ಅನಂತರ 'ನೀನು ಸತ್ತದ್ದೇ ಒಳ್ಳೆಯದಾಯಿತು' ಎಂದು ಹೇಳುವಷ್ಟು ಅವರು ನಿರಾಶೆಯನ್ನು ತಾಳಿದರು!

'ಹನ್ನೊಂದನೆಯ ವರ್ಷದ ಹೊಸ್ತಿಲಲ್ಲಿಯೂ' (೧೯೫೭) ಇದೇ ಹಾಡೇ! ಜೊತೆಗೆ ಈ ಕೆಲವು ಹೆಚ್ಚಿನ ಮಾತುಗಳಿವೆ: 'ದೇಶದ ಹೆಸರ ಸವದಿ ತಮ್ಮ ಜಂಬದ ಮೆರೆಸೆ ಎನಿತೊ ವಾಚಾಲಕರ ಜಗಳ ತಿರುಗಾಟ ಅತಿಥಿಗಳೊ, ಹೆಂಗೆಶನೊ, ಬರುವ ಹೋಗುವ ಪರಿಸೆ...ಭವನಗಳೊ ಸೌಧಗಳೊ ನಿಮ್ಮ ಬಡತನದೆಚ್ಚರಿಲ್ಲದೆ ಹಣವ ಹೂಳಿಸುವ ಲೆಕ್ಕವೊಳವೊ?'

ಮತ್ತೊಂದು ವರ್ಷ (ವಿಕ್ರಮ, ೧೯೫೮) "ಏನು ತೋರಿಸಿದೆಮಗೆ ಮೇಣೇನನಿತ್ತೆ? ರಾಹುವನು ತೊಲಗಿಸಿದೆ, ಕೇತುವನು ತಂದೆ' ಎಂದು ದೇವರಲ್ಲಿ ಸೌಮ್ಯವಾಗಿ ಆಕ್ಷೇಪಿಸಿದರು. 'ವರುಷ ಹದಿನಾಲ್ಕು ನೀನೆಮಗೆ ಬಿಡುಗಡೆ ನೀಡಿ' ಎಂಬ ಪಲ್ಲವಿಯನ್ನು ಹಾಡಿದುದು ೧೯೬೧ರಲ್ಲಿ. ದೇಶದ ದುಸ್ಥಿತಿಗಾಗಿ ಕವಿತಾರೂಪದಲ್ಲಿ ಅದೇ ಕೊನೆಯ ಮೊರೆಯಾಯಿತು. ಮರು ವರ್ಷವೇ ಅವರು ತೀರಿಕೊಂಡರು. ಈ ವಿಷಯವಾಗಿ ಸಾಯುವವರೆಗೂ ಆ ಮಹಾ ಜೀವದ ಸಾತ್ವಿಕ ಚೇತನವು ಕೊರಗಿ.

ಪರಿತಪಿಸುತ್ತಲೇ ಲೀನವಾಯಿತಲ್ಲ—ಎಂಬುದು ನಮ್ಮ ಮನಸ್ಸಿಗೆ ವ್ಯಥೆಯನ್ನುಂಟುಮಾಡುತ್ತದೆ.

## ಗುರುಜನ ಭಕ್ತಿ

ದೈವಭಕ್ತಿ ಮತ್ತು ದೇಶಭಕ್ತಿ ಇವು ಪೈಯವರ ಕವನಗಳಲ್ಲಿ ಒಡಮೂಡಿದ ಬಗೆಯನ್ನು ಇದುವರೆಗೆ ನೋಡಿದೆವು. ಅಂಥದೇ ಭಕ್ತ್ಯಾದರಗಳನ್ನು ಕೆಲವು ಹಿರಿಯ, ಪೂಜನೀಯ ವ್ಯಕ್ತಿಗಳ ವಿಚಾರದಲ್ಲಿ ಅವರು ತಳೆದಿದ್ದರು. ಅವರಿಗೆ ಈ ರೀತಿ ಗುರು ಸ್ಥಾನದಲ್ಲಿದ್ದವರಲ್ಲಿ ಬುದ್ಧ, ಯೇಸು, ಮತ್ತು ಗಾಂಧೀಜಿ ಇವರು ಮುಖ್ಯರು.

ಬುದ್ಧನ ಕಡೆಯ ದಿನದ ಕುರಿತಾದ 'ವೈಶಾಖಿ' ಕಾವ್ಯವಂತೂ ಪ್ರಸಿದ್ಧವೇ ಇದೆ. ಹಾಗೆ ನೋಡಿದರೆ, ಅದರಲ್ಲಿ ಅವರ ಕಡೆಯ ದಿನದಂದು ಜರುಗಿದ ಘಟನೆಗಳಿಗೆ ಪ್ರಾಮುಖ್ಯವಿಲ್ಲ. ಆನಂದ, ಪುಕ್ಕುಸ, ಕುಶಿನಾರದ ಮಲ್ಲರಿಗೆ ಉಪದೇಶ ಮಾಡಿದನು; ಬುದ್ಧನು ನಿರ್ವಾಣವನ್ನು ಹೊಂದಿದನು ಎಂಬುದರಲ್ಲಿ ಅದಾವ ಘಟನಾವಳಿ ಇದ್ದೀತು! ಆದರೆ ಆ ಉಪದೇಶಗಳಲ್ಲಿ ಬುದ್ಧನ ಆತ್ಮಜ್ಞಾನದ ಹಾಗೂ ತನ್ನ ಧಾರ್ಮಿಕ ಚಿಂತನೆಯ ಸಾರವನ್ನೆ ಪೈಯವರು ಕೊಟ್ಟಿರುವುದರಿಂದ, ಆ ಕಾವ್ಯವು ಬುದ್ಧನ ಜೀವನದ ದರ್ಶನವನ್ನೆ ನಮಗೆ ಮಾಡಿಕೊಡುತ್ತದೆ. ಈ ಅರ್ಥದಲ್ಲಿ, ಕತೆಗೆ ಶೀರ್ಷಿಕೆಯಾಗಿ ನಿಂತ 'ವೈಶಾಖಿ'ಯು ಅವನ ನಿರ್ವಾಣದ ಪೂರ್ಣಿಮಾ ತಿಥಿಗಿಂತಲೂ ಅವನು ಬೋಧಿಜ್ಞಾನವನ್ನು ಹೊಂದಿದ, ಪೂರ್ಣಿಮೆಯೆಂದೇ ತಿಳಿಯಬೇಕಾಗುತ್ತದೆ.

ಬುದ್ಧನು ಉಪದೇಶಿಸಿದ ಮಾತುಗಳನ್ನೇ, ಜಾತಕ ಕಥೆಗಳ ಪದ್ಯಾನುವಾದದ ಮೂಲಕ ಪೈಯವರು, ಕಥನಿಸಿದ್ದಾರೆ. ಈ ಕತೆಗಳು ಬುದ್ಧನಿಗೂ ಅವನ ಶಿಷ್ಯರಾದ ಆನಂದ, ತಿಷ್ಯರಿಗೂ ಸಂಬಂಧಪಟ್ಟುವಾಗಿವೆ.

ಓರ್ವ ಹುಲ್ಲುಕಟಿಗನು ಶ್ರವಣನೊಬ್ಬನಿಗೆ ತನ್ನ ಪಾಲಿನ ಹಿಟ್ಟನ್ನೇ ಉಣಬಡಿಸುತ್ತಾನೆ. ಹಾಗೆ ಬಂದು ಹೋದ ಶ್ರವಣನೇ

ಬುದ್ಧ ಎಂದು ತಿಳಿದಮೇಲೆ ಚಡಪಡಿಸುತ್ತಾನೆ. ಬುದ್ಧನ ದೃಷ್ಟಿಯಲ್ಲಿ ಅವನದು ಮಹಾದಾನವೇ. ಅಂತೆಯೇ ಅವನು ಅನ್ನಭರನೆನಿಸುವನು. ಇತ್ತ ಅವನನ್ನು ಕೆಲಸಕ್ಕೆ ಇರಿಸಿಕೊಂಡ ಯಜಮಾನನು ದಿನವೂ ನೂರಾರು ಜನರಿಗೆ ಉಣಬಡಿಸಿದರೂ ದಾನಿಯೆನಿಸಲಾರನೆಂದು ಅವನ ಸ್ವಂತ ಮಗಳ ಅಭಿಪ್ರಾಯ! 'ಆ ಹುಲ್ಲುಕಟಿಗನ ಪುಣ್ಯದಲ್ಲಿ ಪಾಲು ಕೇಳು' ಎಂದು ತನ್ನ ತಂದೆಗೆ ಹೇಳುತ್ತಾಳೆ. ಅನ್ನಭರನು ಕೊಡಲು ಸಿದ್ಧನೇ. ಅದು ಸಾಧ್ಯವೇ ಎಂದು ಕೇಳಲು ಬುದ್ಧನ ಬಳಿಗೆ ಹೋದಾಗ ಬುದ್ಧನು 'ಬಿಸಿಲು ಮಳೆಗಾಳಿ ಜೊನ್ನದ ಬಳಸಲನುಮತಿಯು ಬೇಡುವರೆ?' ಎಂದು ಉಪದೇಶಿಸಿ ಕಳಿಸುವನು. ಇತ್ತ ಯಜಮಾನನು ಹುಲ್ಲುಕಟಿಗನಿಗೆ ತನ್ನ ಸಂಪತ್ತು ಹಾಗೂ ಪದವಿಗಳಲ್ಲಿ ಸಮಪಾಲು ಕೊಡುವೆನೆಂದು ಹೇಳಿದಾಗ, ಅನ್ನಭರನು 'ಒಡೆಯನೆ, ನನ್ನ ಈ ಊಳಿಗವೆ ನನಗೆ ಸಾಕು' ಎಂದು ತನ್ನ ನಿರಿಚ್ಛೆಯನ್ನು ವ್ಯಕ್ತಪಡಿಸುತ್ತಾನೆ.

ಜಾತಕ ಕಥೆಗಳಲ್ಲಿ ಅಭಿಸಾರಿಕೆಯೊಬ್ಬಳನ್ನು ಉದ್ಧರಿಸಿದ ಆನಂದನ ಕತೆಯನ್ನೂ ಪೈಗಳು ಕವನಿಸಿದ್ದಾರೆ. ಆನಂದನಿಗೆ ಸಂಬಂಧಿಸಿದ ಇನ್ನೊಂದು ಮಹತ್ವದ ಕಥೆಯೆಂದರೆ 'ಮಾತಂಗಿ'ಯನ್ನು ಕುರಿತದ್ದು. ಆನಂದನು ಒಮ್ಮೆ ದಾರಿಯಲ್ಲಿ ಒಬ್ಬ ಮಾತಂಗಿ ಕನ್ಯೆಯಿಂದ ನೀರು ಕುಡಿಯ ಬಯಸಿದಾಗ ಆಕೆಯು 'ನೀನು ವಿಪ್ರ. ನಿನ್ನ ಜಾತಿ ಕೆಡದೆ?' ಎಂದು ಸಂದೇಹಿಸುತ್ತಾಳೆ. ಅದಕ್ಕೆ ಅವನು 'ಬಣ್ಣಬಣ್ಣದ ದನಕೆ ಸೊರವೊಂದೆ, ಸೊರೆಯೊಂದೆ; ಬಣ್ಣ ಬೇರೆಂದವನು ವಿಂಗಡಿಸೆ, ಸಲ್ಲ' ಎಂದು ಹೇಳುತ್ತಾನೆ. ಇಂಥ ಆನಂದನ ಮೇಲೆ ಕನ್ಯೆಗೆ ಮೋಹ ಹುಟ್ಟಿತು. ಆಗ ಬುದ್ಧನು ತನ್ನ ಬಳಿಗೆ ಬಂದ ಅವಳಿಗೆ, ಮೋಹ, ಪ್ರೇಮ, ದಯೆ ಇವುಗಳ ಅರ್ಥವನ್ನು ವಿವರಿಸುತ್ತಾನೆ. ಅದರಿಂದ ಅವಳ ವಿಷಯ ನಿವೃತ್ತಿಯಾಗಿ, 'ನುಂಗುತಿಹ ಗಾಳದಿ ತೆರೆಯಿಂದಗಲ್ದ ಮೀನಂತೆ ಪಾರಾಗಿ' ಮನೆಗೆ ಓಂತಿರುಗುತ್ತಾಳೆ. ಆನಂದನ ಈ ಎರಡು ಕತೆಗಳಲ್ಲಿಯೂ ಸ್ತ್ರೀಮೋಹ ನಿವೃತ್ತಿಯ ವಿಷಯವೇ ಇರುವುದೂ, ಬುದ್ಧನ ಕಡೆಯ ದಿನ ಆನಂದನು ಆ ಕುರಿತೇ

ಪ್ರಶ್ನೆ ಮಾಡಿ ಬುದ್ಧನಿಂದ ಉತ್ತರವನ್ನು ಪಡೆಯುವುದೂ ಪರಸ್ಪರ ಪೂರಕ ಸಂಗತಿಗಳಾಗಿವೆ.

ಅಹಿಂಸೆಯ ಮಹತಿಯನ್ನು ಎತ್ತಿ ಹೇಳುವ 'ಭಿಕ್ಷುವೂ ಪಕ್ಷಿಯೂ' ಎಂಬ ಕವನವು ತಿಷ್ಯನಿಗೆ ಸಂಬಂಧಿಸಿದುದು. ಒಬ್ಬ ರತ್ನವಿಕ್ರಯಿಯ ಹೆಂಡತಿಯು ದಿನವೂ ತಿಷ್ಯನಿಗೆ ಭಿಕ್ಷೆಯನ್ನು ನೀಡುವ ಶುದ್ಧಾತ್ಮಳು. ಈ ರತ್ನ ವಿಕ್ರಯಿ ಒಬ್ಬ ಮಾಂಸಾಹಾರಿ. ಮಾಂಸ ಮೆತ್ತಿದ ಕೈಗಳಿಂದಲೇ ರತ್ನದ ಹರಳನ್ನು ಅದರ ಒಡೆಯನಿಂದ ಪಡೆಯುತ್ತಾನೆ. ಇನ್ನು ಅದರಿಂದ ಒಡವೆ ಸಿದ್ಧವಾಗಬೇಕು. ಅಲ್ಲಿಯೇ ಅದನ್ನಿಟ್ಟು ಆ ಹರದನು ಒಳಗೆ ಹೋದಾಗ, ಅವನು ಸಾಕಿದ ಕ್ರೌಂಚಪಕ್ಷಿಯು ಆ ರತ್ನಕ್ಕೆ ಮೆತ್ತಿದ ಮಾಂಸದ ಮೇಲಣ ಆಸೆಯಿಂದ ರತ್ನವನ್ನೆ ನುಂಗುತ್ತದೆ. ಹೀಗೆ ಕಳೆದುಹೋದ ರತ್ನಕ್ಕಾಗಿ, ಅಲ್ಲಿಯೆ ಅಕಸ್ಮಾತ್ ಬಂದು ನಿಂತಿದ್ದ ತಿಷ್ಯನ ಮೇಲೆ ಸಂಶಯ ತಾಳಿ ಅವನನ್ನು ದಂಡಿಸುತ್ತಿದ್ದಾಗ, ಆ ಕ್ರೂರಿಯ ಕಾಲಡಿಗೆ ಸಿಕ್ಕು ಆ ಕ್ರೌಂಚಪಕ್ಷಿ ಸಾಯುತ್ತದೆ. ಅದು ವರೆಗೆ ಸಹನೆಯಿಂದ ಹಿಂಸೆಯನ್ನು ಎದುರಿಸುತ್ತಿದ್ದ ತಿಷ್ಯನು 'ನಿನ್ನ ರತ್ನವ ನುಂಗಿತೀ ಹಕ್ಕಿ. ನಾನಲ್ಲ. ಸತ್ತುದರಿಂ ಒರೆವೆನು. ಅದು ಸಾಯದಿರಲು ಎನ್ನ ಜೀವ ತೆತ್ತು ಅದನುಳಿಸುತ್ತಿದ್ದೆ. ಯಾವುದಕಿಲ್ಲ ಬದುಕಿನಕ್ಕರೆ?' ಎಂದು ಹೇಳಿ ಪ್ರಾಣ ನೀಗುವನು. ಪೈಯವರು ಈ ಪದ್ಯದಲ್ಲಿ ಹಿಂಸೆ–ಕ್ರೌರ್ಯಗಳ ವಿರುದ್ಧವಾಗಿ ಅಹಿಂಸೆ–ದಯೆಗಳು ಗೆದ್ದುದನ್ನು ಮಾರ್ಮಿಕವಾಗಿ ತೋರಿಸಿದ್ದಾರೆ. ಇವು ಮೂರು ಜಾತಕ ಕಥನ ಕವನಗಳಲ್ಲಿಯ ಸಂಭಾಷಣೆಗಳು ಔಚಿತ್ಯ ಹಾಗೂ ಪರಿಣಾಮಕಾರಿತ್ವಕ್ಕೆ ಮಾದರಿಯಾಗಿವೆ.

ಪೈಯವರು ಆದರವನ್ನಿರಿಸಿಕೊಂಡ ಇನ್ನೊಬ್ಬ ಮಹಾಪುರುಷನೆಂದರೆ ಬಾಹುಬಲಿ. ಬಾಹುಬಲಿ–ಗೊಮ್ಮಟನ ಬಗ್ಗೆ ಅವರು ವಿಶೇಷ ಸಂಶೋಧನೆ ಮಾಡಿದುದಲ್ಲದೆ, ಗೊಮ್ಮಟೇಶ್ವರನ ಮಸ್ತಕಾಭಿಷೇಕದ ನಿಮಿತ್ತ (ಕ್ರಿ.ಶ. ೧೯೨೮) ೩೫ ವೃತ್ತಗಳುಳ್ಳ ಸ್ತುತಿಯನ್ನು ರಚಿಸಿದ್ದಾರೆ. ಯೇಸುಕ್ರಿಸ್ತನ ಕಡೆಯ ದಿನದ

ಕುರಿತಾದ 'ಗೊಲ್ಗೊಥಾ'ದ ಬಗ್ಗೆ ಈಗಾಗಲೇ ಸಾಕಷ್ಟು ರಸ ವಿಮರ್ಶೆ ಬಂದಿದೆ. ಶ್ರೀಕೃಷ್ಣನಿಗೆ ಸಮಾನನಾದ ಯೇಸುವಿನ ವಿಷಯದಲ್ಲಿ ಅವರ ಆದರವೂ, ಬೈಬಲಿನ ಕೂಲಂಕಷ ಅಭ್ಯಾಸವೂ ಈ ಕಾವ್ಯದ ಯಶಸ್ಸಿನ ಹಿನ್ನೆಲೆಯಾಗಿದೆ. ಅನ್ಯ ಮತದವರು ಕ್ರೈಸ್ತ ಸಾಹಿತ್ಯವನ್ನು ರಚಿಸಿದುದು ಕಡಿಮೆ. ಕ್ರೈಸ್ತರು ಹಿಂದೂಧರ್ಮದಲ್ಲಿ ಸಹನೆಯಿಟ್ಟುದೂ ಕಡಿಮೆ. ಆದರೆ ಪೈಯವರು ಕ್ರಿಸ್ತನ ಜೀವನವಿಚಾರದಲ್ಲಿ ಯಾವ ಕ್ರೈಸ್ತಬಾಂಧವನಿಗೂ ಕಡಿಮೆಯೆನಿಸದಷ್ಟು ಶ್ರದ್ಧೆಯನ್ನು ತೋರಿ, ಉತ್ಕೃಷ್ಟ ಕಾವ್ಯವೊಂದನ್ನು ರಚಿಸಿದುದು ಅತ್ಯಂತ ಹೆಗ್ಗಳಿಕೆಯ ವಿಷಯವಾಗಿದೆ. ಡಾ॥ ಮುಗಳಿಯವರಂದಂತೆ ಕನ್ನಡ ಸಾಹಿತ್ಯದಲ್ಲಿ ಇದೊಂದು ಪವಾಡವೇ ಸೈ (ದೀವಿಗೆ, ಭಾ. ೧).

ಅದರಂತೆ ರನ್ನ, ವಿದ್ಯಾರಣ್ಯ, ಕುಮಾರವ್ಯಾಸ ಇವರಲ್ಲಿಯೂ ಗುರುಭಕ್ತಿಯನ್ನು ಹೊಂದಿದವರಾಗಿ ಪೈಯವರು ಅವರ ಸ್ತೋತ್ರ ಮಾಡಿದ್ದಾರೆ. ಈಚಿನವರಾದ ಅರವಿಂದರ ದರ್ಶನವನ್ನೂ ಪೈಯವರು ಅಭ್ಯಸಿಸಿ, ಅವರ ಬಗ್ಗೆ ಆದರಭಾವವನ್ನು ತಾಳಿದುದು 'ಹಗಲು ಕನಸು' ಎಂಬ ಕವನದ ಮೂಲಕ ವ್ಯಕ್ತವಾಗಿದೆ.

### ಗಾಂಧೀಜಿ

ಯುಗಪ್ರವರ್ತಕ ಗಾಂಧೀಜಿಯವರಲ್ಲಿ ಪೈಯವರಿಗೆ ಅನನ್ಯತ ಆದರವಿದ್ದಿತು. ಎಷ್ಟೆಂದರೂ ಗಾಂಧೀಜಿ ಪೈಯವರ ಹಂಬಲದ ವಿಷಯವಾಗಿದ್ದ ದೇಶಸ್ವಾತಂತ್ರ್ಯದ ಅಧ್ವರ್ಯುಗಳು ತಾನೇ. ಪೈಯವರು ಕವನವೊಂದರಲ್ಲಿ, ಗಾಂಧೀಜಿಯು ಅದೆಂತು 'ಭಾರತ ಭಾಗ್ಯ ವಿಧಾತಾ' ಆಗಿದ್ದರೆಂಬುದನ್ನು ಪರ್ಯಾಯವಾಗಿ ಸೂಚಿಸಿದ್ದಾರೆ. ೧೯೨೪ರಲ್ಲಿ ಗಾಂಧೀಜಿಯು ಉಪವಾಸ ಮಾಡಿದಾಗ, ಈ ರೀತಿಯ ಉಪವಾಸಾದಿಗಳಿಂದ ಲೋಕಕಲ್ಯಾಣವನ್ನು ಸಾಧಿಸಲು ಬಯಸಿದ ಶುಕ, ಸಂಬುದ್ಧ, ಏಸು ಹಾಗೂ ಮಹಮ್ಮದ ಪೈಗಂಬರ ಇವರೊಂದಿಗೆ ಹೋಲಿಸಿದ್ದಾರೆ.

ಪೈಯವರು ಗಾಂಧೀಜಿಯಲ್ಲಿ ಅಂಧಶ್ರದ್ಧೆಯನ್ನೇನೂ ಇಟ್ಟಿರಲಿಲ್ಲ. ಮಹಾತ್ಮರ ಈಚಿನ ಕೆಲವು ಯೋಚನೆ, ಕಾರ್ಯಗಳು ಅವರಿಗೆ ಹಿಡಿಸಿರಲಿಲ್ಲ. ದೇಶದ ವಿಭಜನೆಗೆ ಗಾಂಧೀಜಿಯು ಸಮ್ಮತಿಸಿದುದು ಪೈಯವರಿಗೆ ನುಂಗಲಾರದ ತುತ್ತಾಯಿತು. ಆ ಬಗ್ಗೆ ತಮ್ಮ ವಿರೋಧವನ್ನು ಖಾಸಗಿಯ ಮಾತುಕತೆಗಳಲ್ಲಿ (ಉದಾ: ಶಿವರಾಮ ಕಾರಂತರೊಡನೆ) ವ್ಯಕ್ತಪಡಿಸಿದುದೂ ಉಂಟು. ಇದೇ ಕಾಲಕ್ಕೆ ಜಾತೀಯ ಗಲಭೆಗಳುಂಟಾಗಿ, ನೌಖಾಲಿ–ಬಿಹಾರಗಳಲ್ಲಿ ಸಾವಿರಾರು ಜನ ಹಿಂದೂ ಮುಸ್ಲಿಮರು ಪ್ರಾಣವನ್ನು ನೀಗಿದರಷ್ಟೆ. ಬಿಹಾರದಲ್ಲಿಯ ಹಿಂದೂಗಳ ಕೃತ್ಯವನ್ನು ಮಾತ್ರ ಖಂಡಿಸಲೆಂದು, ಗಾಂಧೀಜಿಯವರು ಉಪವಾಸ ಮಾಡಿದುದು ಪೈಯವರ ನೇರ ವಿಚಾರಸರಣಿಗೆ ಒಗ್ಗಲಿಲ್ಲ. ಅದಕ್ಕೂ ೨೨ ವರ್ಷಗಳ ಹಿಂದೆ ಮಾಡಿದ ಉಪವಾಸವನ್ನು ಎತ್ತಿ ಹಿಡಿದಿದ್ದ ಪೈಯವರು ಈಗ, ಆ ಬಗ್ಗೆ ಉದಾಸೀನರಾದರು.

ಆದರೆ ಮುಂದೆ ಕೆಲವೇ ತಿಂಗಳುಗಳಲ್ಲಿ ಗಾಂಧೀಜಿಯ ಕೊಲೆಯಾಗುತ್ತಲೂ ಪೈಯವರು ಅನುತಾಪಪಟ್ಟುದು ಅಷ್ಟಿಷ್ಟಲ್ಲ. 'ಅಯ್ಯೋ, ಅದೆಂಥ ಮಹಾತ್ಮನನ್ನು ನಾವು ಕಳೆದುಕೊಂಡೆವಲ್ಲ. ಇಂಥವರ ಮೇಲೆ ನಾನು ಅನವಶ್ಯಕವಾಗಿ ಬೇಸರಿಸಿದೆನೆ?' ಎಂದು ಪರಿತಪಿಸಿದರು. ಅದಕ್ಕೆ ಪಶ್ಚಾತ್ತಾಪರೂಪವಾಗಿ 'ಕ್ಷುಲ್ಲಕ'ವಾದೊಂದು ಕವನ ಕೃತಿಯನ್ನು ಅರ್ಪಿಸಬೇಕೆಂದು ನಿರ್ಧರಿಸಿದರು. ಇದುವೆ ಅವರ 'ಕವನ ದೇಹಲಿ' ಅಥವಾ 'ಮಹಾತ್ಮರ ಕಡೆಯ ದಿನ' ಎಂಬ ಖಂಡಕಾವ್ಯದ ಹಿನ್ನೆಲೆ. ಅವರು ನಮಗೆ ಮುಖತಃ ತಿಳಿಸಿದ ಪ್ರಕಾರ ಕೊಲೆಯ ಹಿಂದಿನ ದಿನದ ಸಂಜೆಯಿಂದ ಈ ಕಾವ್ಯಕಥನವು ಆರಂಭವಾಗಿ, ಆ ರಾತ್ರಿ ಗಾಂಧೀಜಿ ಚಿಂತಿಸಿದ ವಿಚಾರಗಳು, ಮರುದಿನದ ಬೆಳಗಿನ ಕೆಲ ಘಟನೆಗಳು, ಕೊಲೆಗಾರನ ಮನೋಭಾವ, ಅವನ ಗುಂಡು ಎದೆಯೊಳಗೆ ನಟ್ಟಾಗ ಗಾಂಧೀ ಉಸುರಿದ ಕೊನೆಯ ಶಬ್ದಗಳು ಹಾಗೂ ಕೈಮುಗಿತ ಇವುಗಳ ವಿಶೇಷಾರ್ಥ; ಅಬ್ರಹಾಂ ಲಿಂಕನ್ನನ

ಕೋಲಿಯ ಸಾಮ್ಯ, ರಾತ್ರಿಯ ವೇಳೆಯಲ್ಲಿ ಚಂದ್ರೋದಯ—ಇವೆಲ್ಲ ಅಂಶಗಳನ್ನು ಈ ಕಾವ್ಯ ಒಳಗೊಳ್ಳಲಿತ್ತು. ಅದು ಪೂರ್ಣವಾಗದಿದ್ದುದು ಕನ್ನಡಕ್ಕೊದಗಿದ ಒಂದು ನಷ್ಟವೇ ಸೈ. ಈ ಕಾವ್ಯ ರಚನೆಗೆ ಕೈಹಾಕುವುದಕ್ಕೆ ಮುಂಚೆಯೇ, ಅವರು 'ಮಹಾತ್ಮನ ಆತ್ಮಕ್ಕೆ' ಎಂಬ ಅಷ್ಟ ಷಟ್ಪದಿಯನ್ನು ಬರೆದು ತಮ್ಮ ಬಾಷ್ಪಾಂಜಲಿಯನ್ನು ಅರ್ಪಿಸಿದ್ದಾರೆ.

## ಪ್ರೀತಿ ಭಾವನೆ

ದೇವರ ವಿಷಯದಲ್ಲಿ ಭಕ್ತಿ, ದೊಡ್ಡವರ ವಿಷಯದಲ್ಲಿ ಆದರ ಇವು ಪೈಯವರ ಕೃತಿಗಳಲ್ಲಿ ಹೇಗೆ ಒಡಮೂಡಿವೆಯೆಂಬುದನ್ನು ನೋಡಿದೆವು. ಇನ್ನು ಸೃಷ್ಟಿಯ ಚರಾಚರ ವಸ್ತುಗಳಲ್ಲಿ ಪೈಯವರಲ್ಲಿ ಸಹಜವಾಗಿ ಇದ್ದ ಪ್ರೀತಿಭಾವನೆಯು ಯಾವ ರೀತಿಯಾಗಿ ಕಾವ್ಯದಲ್ಲಿ ಹೊರಹೊಮ್ಮಿದೆಯೆಂಬುದನ್ನು ಪರಿಶೀಲಿಸೋಣ. ಅವರ ಈ ಮನೋಭಾವವನ್ನು ನಿಸರ್ಗ ಪ್ರೀತಿ, ಪತ್ನಿ ಪ್ರೇಮ ಮತ್ತು ಇತರ ಜೀವಿಗಳ ವಿಷಯದಲ್ಲಿ ಅಂತಃಕರಣ—ಈ ಮೂರು ವಿಧದಲ್ಲಿ ಕಾಣುತ್ತೇವೆ.

### ನಿಸರ್ಗ

ನಿಸರ್ಗದ ಚೆಲುವನ್ನು ಮೆಚ್ಚಿ ಅದನ್ನು ಕವಿತಾರೂಪದಲ್ಲಿ ಹೊರಹೊಮ್ಮಿಸದ ನವ್ಯೋದಯ ಕವಿಯೇ ಇಲ್ಲ. ಪೈಯವರ ಇಂಥ ಕವಿತೆಗಳು ಕೆಲವೇ ಇವೆ. ಮತ್ತು ಅವುಗಳಲ್ಲಿ ನಿಸರ್ಗದ ಬಾಹ್ಯ ನೋಟದ, ಅದರ ಚೆಲುವಿಕೆಯ ವರ್ಣನೆ ಇರದೆ, ಅವು ಭಗವಂತನ ಸೃಷ್ಟಿಯ ಒಂದು ಅಂಶವೆಂಬ ಹಿನ್ನೆಲೆಯಲ್ಲಿ, ಅವುಗಳ ಅಸ್ತಿತ್ವದ ವಿಶೇಷಾರ್ಥವನ್ನು ಪೈಯವರು ಇಂಥ ಕಥನಗಳಲ್ಲಿ ತೋರಿಸಿಕೊಟ್ಟಿದ್ದಾರೆ.

ಮೊತ್ತಮೊದಲಿಗೆ ಕಡಲು! ಪೈಯವರ ಮನೆಯ ಸನಿಯದಲ್ಲೇ ಇರುವ ಕಡಲಿನ ಚಿತ್ರಣವನ್ನು ಪೈಯವರು ಕೊಟ್ಟಿರು

ವುದು ಯಥಾ ಸಹಜವಾದುದು. 'ಪ್ರಭಾಸ' ಖಂಡಕಾವ್ಯದ ಆರಂಭದ ಸಾಲುಗಳಾಗಿ, ಈ ಕವನ ರಚಿತವಾದರೂ, ತನ್ನಷ್ಟಕ್ಕೆ ಪರಿಪೂರ್ಣವಾಗಿದೆ. ಇಲ್ಲಿ ಬಂದಿರುವುದು ಭೋರ್ಗರೆಯುವ ಕಡಲಿನ ಚಿತ್ರಣ. 'ಉರುಳುರುಳು, ಹೊರಳು ಹೊರಳಾಡು ನೀಲಾಂಬೋಧಿ' ಎಂಬುದಾಗಿ ಕಡಲನ್ನು ಸಂಬೋಧಿಸಿದ್ದಾರೆ. 'ಧರೆಯೊಳಾವಾಪ ಸಚರಾಚರಂ ಸೃಷ್ಟಿ'ಯಿದೆಯೊ ಅದರ ಪ್ರತಿ ಸೃಷ್ಟಿಯನ್ನೊಳಗೊಂಡ ಸಮುದ್ರವು ಒಂದು ಪ್ರಚಂಡ ಶಕ್ತಿಯಾಗಿ ಅವರಿಗೆ ಕಂಡಿದೆ. ಅಲ್ಲದೆ, ಕಡಲಿನ ಬಗೆಗೆ ಋಗ್ವೇದ ಕಾಲದಿಂದಲೂ ಇದ್ದ ನಮ್ಮ ದೈವಿಕತೆಯ ಕಲ್ಪನೆ ಏನು ಎಂಬುದನ್ನೂ ಇಲ್ಲಿ ಹೇಳಿದ್ದಾರೆ. ಕಡಲನ್ನು ಕುರಿತು ಇದೊಂದು ಪ್ರೌಢ ಕವನವಾಗಿದೆ. ಅದರ ಸಂಸ್ಕೃತ ಭೂಯಿಷ್ಠ ಶೈಲಿಯು ಆ ಕಡಲಿನ ರೌದ್ರತೆಯನ್ನು ಚಿತ್ರಿಸುವುದಕ್ಕೆ ಸಹಾಯಕವಾಗಿದೆ.

ಒಂದು ರಾತ್ರಿ ಪೈಯವರು ಸಮುದ್ರ, ಗಗನಗಳನ್ನು ನೋಡುತ್ತ ನಿಂತಿದ್ದಾಗ, ಗಗನದ ನೀಲ ವಿಶಾಲತೆಯಿಂದ, ನಕ್ಷತ್ರವೊಂದು ತನ್ನ ಇತರ ಜೊತೆಗಾರರನ್ನು ಅಗಲಿ, ಜಗುಳಿ, ಅಗಾಧವಾದ ಸಮುದ್ರದಲ್ಲಿ ಕಣ್ಮರೆಯಾಯಿತು. ಆಗ ಸ್ಫುರಣಗೊಂಡ ಭಾವಗಳನ್ನು 'ಜಗುಳಿದ ನಕ್ಷತ್ರ' ಎಂಬ ಕವನದಲ್ಲಿ ವ್ಯಕ್ತಪಡಿಸಿದ್ದಾರೆ.

'ಗಿಳಿವಿಂಡು'ನಲ್ಲಿ ಪಕ್ಷಿಗಳನ್ನು ಕುರಿತ ಭಾವಲಹರಿಗಳಿವೆ. ಬಾನಕ್ಕಿ ಮತ್ತು ಚಿಟ್ಟೆ—ಇವುಗಳನ್ನು ನೆನೆದ ಕವನಗಳು ಇಂಗ್ಲಿಶ್‌ನಿಂದ ಬಂದುವುಗಳಾದರೆ ಚಾತಕಪಕ್ಷಿಯನ್ನು ಕುರಿತ ಒಂದು ಕವನವು ಪೈಯವರದೇ. ಈ ಪಕ್ಷಿಗಳಿಗಿಂತ, ತಮ್ಮ ಮನೆಯ ಹಿಂದಣ ಮಾಮರದಲ್ಲಿ ಸುಳಿದಾಡುವ ಮಿಂಚುಹುಳವು ಪೈಯವರ ಮನಸ್ಸನ್ನು ಹೆಚ್ಚಾಗಿ ಸೆರೆಹಿಡಿದಂತೆ ಕಾಣುತ್ತದೆ. ಈ ಹುಳಗಳ ಇರುವಿಕೆಯಲ್ಲಿ ವಿಶೇಷ ಅರ್ಥವನ್ನು ಕಂಡರು. ಆ ಮಿಂಚುಹುಳಗಳು ತಮಗೆ ಒದವಿದ ತಂಬೆಳಕನ್ನು, ಶಾಂತಿಯ ಸೊಂಪನ್ನು ಮೆರೆಯಿಸುವಂತೆ ದೇವನೆದುರು ಬತ್ತಿಯನ್ನೆತ್ತಿದಂತೆ ಕವಿಗೆ ಭಾಸವಾಗುತ್ತದೆ. ಅಂತೆಯೇ "ಈ ಹುಳದಂತೆ ನಿನ್ನಯ ಮುಂತೆ ನಾ ನಿಲುವಂತೆ ದಕ್ಕಿಸು ನನ್ನೆದೆಗಕ್ಕರೆಯಾ.

ಬಿಸುಪಿಲ್ಲದ ಮಿಸುಪನ್ನೆರೆಯಾ' ಎಂದು ಈ ಕವಿತೆಯಲ್ಲಿ ಕೇಳಿ ಕೊಳ್ಳುತ್ತಾರೆ.

ಮಿಂಚುಹುಳವು ಚಿಕ್ಕದಾದರೂ ಅದರ ಬದುಕು ತನ್ನ ಮಟ್ಟಿಗೆ ಸಫಲವೇ. ಅದನ್ನರಿಯದ ನಕ್ಷತ್ರವು 'ನಮ್ಮ ಬೆಳಕನ್ನು ನೀವು ತೆಗೆದುಕೊಂಡಿದ್ದೀರಿ?' ಎಂದು ಮಿಂಚುಹುಳವನ್ನು ಆರೋಪಿಸಿತಂತೆ. ಅದರಂತೆ ಜಲಾಶಯದ ತೆರೆಗಳ ಸಮೂಹವು 'ನಮ್ಮ ದನಿಯನ್ನೆ ನೀವು ಅನುಕರಿಸುತ್ತಿದ್ದೀರಿ' ಎಂಬುದಾಗಿ ಚಿಮ್ಮುಂಡೆ (ಜೀರುಂಡೆ) ಹುಳಕ್ಕೆ ಹೇಳಿತಂತೆ. ಆಗ ಈ ಹುಳಗಳು 'ನಮ್ಮದು ನಮಗಿದೆ. ಭಗವಂತನ ಸೃಷ್ಟಿಯಲ್ಲಿ ಎಲ್ಲವೂ ಸಫಲ ಹಾಗೂ ಪರಿಪೂರ್ಣ!' ಎಂದು ಹೇಳುತ್ತವೆ. ಅದನ್ನು ಸಿದ್ಧಪಡಿಸುವುದಕ್ಕೆ. ವರ್ಷಾಕಾಘಿದ ಒಬ್ಬ ಪಥಿಕನ ಅನುಭವವನ್ನು ಕೊಡಲಾಗಿದೆ. ಮರುಹುಳಿ ಬೀಳುವ ಆ ರಾತ್ರಿ ತಾರೆ, ತೆರೆ ಇವಾವುವೂ ಅವನ ಗಮನಕ್ಕೆ ಬರಲೇ ಇಲ್ಲ. ಅವನಿಗೆ ಕಂಡದ್ದು ಮಿಂಚುಹುಳದ ಬೆಳಕು. ಹಾಗೂ ಚಿಮ್ಮುಂಡೆಯ ಸ್ವರ ಮಾತ್ರ! 'ಸುಡುಗಾಡಿನ ಸಂಪಗೆಯ ಮರ'ವನ್ನು ಕುರಿತ ಭಾವಗೀತೆಯಲ್ಲಿಯೂ. ಈ ಸಫಲತೆಯ ವಿಚಾರವೇ ಪರ್ಯಾಯವಾಗಿ ಬಂದಿದೆ. ಸಂಪಗೆಯ ಮರವು ಸುಡುಗಾಡಿನಲ್ಲಿದೆಯೆಂದು ಅಲಕ್ಷ್ಯ ಮಾಡಲಾಗದು. ಎಂಬುದು ಈ ಪದ್ಯದ ಧ್ವನಿಯಾಗಿದೆ.

ಕ್ರಿ.ಶ. ೧೯೫೨ರಲ್ಲಿ ಪೈಯವರು ಬೇಲೂರಿಗೆ ಹೋಗಿ, ಅಲ್ಲಿನ ಶಿಲ್ಪ ಸೌಂದರ್ಯವನ್ನು ಸವಿದ ಪ್ರಸಂಗದಲ್ಲಿ ಬರೆದ ಎರಡು ಪದ್ಯಗಳು ವಿಶಿಷ್ಟವಾಗಿವೆ. ಅಲ್ಲಿ, ಕಲ್ಲೊಳಗೆ ಕಟೆಯಲಾದ. ಒಬ್ಬಳ ಸೀರೆಯನ್ನು ಸೆಳೆಯುವ ಮಂಗ, ಹಾಗೂ ಇನ್ನೊಂದೆಡೆ ಒಂದು ಚೇಳು, ಇವನ್ನು ಕಂಡರು. 'ಮಂಗ. ಇಂತೇಕೊ ನೀನವಳ ಸೀರೆಯ ಸುಗಿವೆ?' ಎಂದು ಕೇಳಿದರು. 'ಅಂದಿನಿಂದ ಈ ಚೇಳಿನ ಹರೆಯ ಒಂದು ದಿನವೂ ಹೆಚ್ಚಿಲ್ಲ' ಎಂದು ಆ ಚೇಳಿನ ವರ್ಣನೆಮಾಡಿದರು. ಈ ರೀತಿಯ ಸರಸವಾದ ಭಾವ ಲಹರಿಯನ್ನೊಳಗೊಂಡ ಇಂಥ ಪದ್ಯಗಳನ್ನು ಪೈಯವರು ಬೇರೆ ಬರೆದಂತಿಲ್ಲ.

'ನಾನು ಮನ ನೊಂದಾಗ, ಆ ನೋವನ್ನು ಮರೆಸಲೆಂದು ಕವಿತೆ ಬರೆಯುತ್ತೇನೆ' ಎಂದು ಪೈಯವರು ಹೇಳಿದ್ದಾಗ, ತಮ್ಮ ಸಹಧರ್ಮಿಣಿಯನ್ನು ಕುರಿತು ತಾವು ಬರೆದ ಪದ್ಯಗಳನ್ನೆ ಅವರು ಗಮನದಲ್ಲಿಟ್ಟಿರಬೇಕು. ಕವಿಗಳು ತನ್ನ ಪ್ರೇಯಸಿ, ಅಥವಾ ಬಾಳಸಂಗಾತಿಯನ್ನು ವರ್ಣಿಸಿ ಕವಿತೆಗಳನ್ನು ಬರೆಯುತ್ತಾರಷ್ಟೆ. ಪೈಯವರ ಇಂಥ ಕವನಗಳು ಅವರ ಪತ್ನಿಯ ಅಕಾಲ ಮರಣದಿಂದ ಪ್ರೇರಿತವಾಗಿ ವಿರಹವ್ಯಥೆಯಿಂದ ಕೂಡಿವೆ.

ಇದಕ್ಕೆ ಒಂದೇ ಒಂದು ಅಪವಾದವೆಂದರೆ 'ಸಾಕು' ಎಂಬ ಕವನ. ಇದು ೧೯೩೭ರಲ್ಲಿ ಮೊದಲು ಪ್ರಕಟವಾಗಿದ್ದರೂ ಅದರ ವಸ್ತುವನ್ನು ಗಮನಿಸಿದರೆ, ಅದು ಅವರ ಪತ್ನಿ ಜೀವಂತವಿರುವಾಗ, ಮದುವೆಯಾದ ಹೊಸತರಲ್ಲಿ ಬರೆದಂತಿದೆ.[5] ಪರಿಶುದ್ಧ ಪ್ರೀತಿಯನ್ನು ವ್ಯಕ್ತಗೊಳಿಸಿರುವ ಈ ಪದ್ಯದ ಕೆಲವು ಸಾಲುಗಳು ಗಮನಾರ್ಹವಾಗಿವೆ:

ಬಾರ ಬಾಳ್ವೆಯ ದೇವಿ
ನನ್ನುಪಾಸನೆಗೋವಿ
ಪ್ರೇಮದ ಮನೋನಯನಮಂ ತೆರೆದೆ ಸಾಕು
ಎಣೆಯ ರೆಕ್ಕೆಗಳಂತೆ ಹೆರೆಯ ಕೊಂಬುಗಳಂತೆ
ನಾವೊಂದು ಬದುಕನಿಬ್ಬರು ಬದುಕೆ ಸಾಕು.
    ಪ್ರಯಣ ಜಪ ಗಾಯತ್ರಿ
    ಸಕಲ ಸುಖದ ವಿಧಾತ್ರಿ
    ನಿನ್ನ ದೊರೆತೆನ್ನ ಸಂಪನ್ನತೆಯೆ ಸಾಕು
    ಪಡೆವ ಕಾಣಿಕೆ ನೀನೆ

---

[5] ಹಾಗೆಂದು ನಾವು ಖಚಿತವಾಗಿ ಹೇಳಲಾರೆವು. ಒಂದು ವೇಳೆ, ಹೆಂಡತಿಯ ಮರಣದ ಅನಂತರ ರಚಿತವಾಗಿದ್ದರೆ, ಈ ಪದ್ಯದಲ್ಲಿ ಸಂಬೋಧಿಸಲಾದ 'ಬಾಳ್ವೆಯ ದೇವಿ'ಯು ಅವರ ಪತ್ನಿಯಾಗಿರದೆ, ಬಾಳ್ವೆ ಅಥವಾ ಜೀವನವನ್ನು ಸಾಂಕೇತಿಕವಾಗಿ ಉದ್ದೇಶಿಸಿ ಈ ಕವಿತೆ ಬರೆದುದೆಂದು ಹೇಳಬೇಕಾಗುತ್ತದೆ. ಆದರೆ ಇಂಥ ಊಹನೆಗೆ ಕವಿತೆಯಲ್ಲಿನ ಮುಂದಿನ ಭಾಗವು ಹೊಂದಿಕೆಯಾಗುತ್ತಿಲ್ಲವಲ್ಲ !

ನುಡಿವ ಜಾಣೆಕೆ ನೀನೆ
ನೀನೆ ಜೀವನ ಕವಿತೆಯರ್ಥವೆನೆ ಸಾಕು.
ಒಲುಮೆಯೊಡವೆಯು ನಿನ್ನ
ಹೃದಯದಿಂ ಕದಿವೆನ್ನ
ನಿನ್ನ ಸೆಳೆ ತೋಳ ಸೆರೆಮನೆವೊಗಿಸೆ ಸಾಕು
ನಿನ್ನ ತೆಕ್ಕೆಯೊಳೆನ್ನ
ಧನ್ಯಂ ಬಗೆಯೆ ನಿನ್ನ
ಕೊರಳಕಟ್ಟಾಣಿ ಕಿಲಕಿಲನೆ ನಗೆ ಸಾಕು
ಇಂತೆನ್ನ ನೀ ಜಾಣೆ
ನಿನ್ನ ಕೆಯ್ಗಳ ವೀಣೆ
ಎಸಗಿ ರಾಗಾನುರಾಗವ ನುಲಿಸೆ ಸಾಕು
ಅಂತು ಬಾಳ್ವೆಯು ಕೊನೆಗೆ
ನಮ್ಮನಾ ಹಸೆ ಮನೆಗೆ
ಹೊಸ ವಧೂವರರಂತೆ ವ್ಯತಿ ನಡಿಸೆ ಸಾಕು
ಎಂದೆಂದು ಬರುವಂದು
ನಮ್ಮ ಬಾಳ್ವೆಗಳೊಂದು
ಮೂಗಿನೆರಡುಸುರಂತೆ ಸಂಗಡಿಸೆ ಸಾಕು
ಕೊನೆಗೆ ಬವಣೆಯೆ ಮುಗಿಯೆ
ಗಂಗೆ ಯಮುನೆಯಲೊಗೆಯೆ
ಸಂಗಮಿಸಿ ಪ್ರೇಮವಾರ್ಧಿಗೆ ಹಾಯೆ ಸಾಕು.

ಹೀಗೆ ಕೂಡಿ ಬಾಳಬೇಕು, ಕೂಡಿಯೆ ಸಾಯಬೇಕು; ಅಷ್ಟು ಮಾತ್ರ ಸಾಕು ಎಂದು ಅಪೇಕ್ಷಿಸಿದ್ದ ಪೈಯವರಿಗೆ ವಿಧಿ ಬೇರೆಯದನ್ನೆ ಬಗೆಯಿತು. ತಾತ್ಪೂರ್ವಿಕವಾಗಿ ಅವರಿಬ್ಬರನ್ನು ಅಗಲಿಸಿತು. ಕೊನೆಗೆ ಈ ಗೋವಿಂದ–ಕೃಷ್ಣೆಯರ ಸಂಗಮವು ದೇವಲೋಕದಲ್ಲಿಯೆ ಆಯಿತು.

ಪೈಯವರ ಪತ್ನಿಯು ತೀರಿಕೊಂಡದ್ದು ಪ್ರಭವ ಸಂವತ್ಸರದ ಪೂರ್ವಾರ್ಧದಲ್ಲಿ. ವಿಭವ ಸಂವತ್ಸರದ ಯುಗಾದಿಯು ಬಂದಾಗ. ಹಿಂದಿನ ಸಂವತ್ಸರದ ಪ್ರಥಮ ದಿನದ ನೆನಪಾಯಿತು. ಆಗಿನ್ನೂ ಅವರ ವಿರಹ ವ್ಯಥೆಯು ಬಿಸಿ ಆರದಿದ್ದ ಕಾಲ. 'ನನಗೆ ಏನಾದರೇನು? ನೀನು 'ಅಲ್ಲಿ' ನೆಮ್ಮದಿಯಿಂದಿರಬೇಕು. ಬದು

ಕಿನ ಅವಧಿ ತೀರಿದೊಡನೆ ನಾ ನಿನ್ನ ಬಂದು ಸೇರಿಯೇನು' ಎಂಬ ಅಸಹಾಯಕತೆಯನ್ನು ಆ ಪದ್ಯದಲ್ಲಿ ವ್ಯಕ್ತಪಡಿಸಿದರು.

ಪತ್ನಿಯ ಮರಣವು ಮರಣಾನಂತರದ ಜೀವನದ ಬಗ್ಗೆ ಅವರನ್ನು ಯೋಚನೆಯಲ್ಲಿ ಕೆಡಹಿತು. ತಾನು ನೆನೆಯುವ ಹಾಗೆ ಆಕೆ ಅಲ್ಲಿ, ತನ್ನನ್ನು ನೆನೆಯುತ್ತಿರಬಹುದೆ? ತಾವು ಮತ್ತೆ ಒಂದಾಗಬಹುದೆ? ಅದರ ಬಗೆಯೆಂತು? ಮರಣ ಹೊಂದಿದವರು ತಿರುಗಿ ಬರುತ್ತಾರೆಯೆ? ಎಂದೆಲ್ಲ ಅವರು ಸಂದೇಹಿಸುವಂತಾಯ್ತು.

ತಮಗೆ ಇಂಥ ಅತಂತ್ರ ಸ್ಥಿತಿಯನ್ನು ತಂದೊಡ್ಡಿದ ವಿಧಿಯ ಮೇಲೆ ಕವಿಗೆ ತುಂಬಾ ಬೇಸರ. 'ಸುಮ್ಮನೇಕೆನ್ನನೆಲೆ ವಿಧಿಯೆ ಕಾಡಿಸುವೆ? ಬೇಡಿದುದ ಕೊಡೆ; ಬೇಡವಾದುದನಾಯ್ದು ಕೊಡುತ್ತೀಯೆ. ಕೃಷ್ಣೆ ಇಲ್ಲದ 'ಇಂದು' ನನಗೆ ಬೇಕಿಲ್ಲ. ಆಕೆ ಕಾಣದ 'ನಾಳೆ'ಯದರ ಹಂಬಲವೂ ನನಗಿಲ್ಲ. ಅವಳು ಇದ್ದ 'ನಿನ್ನೆ'ಯ ನೆನಪು ಮಾತ್ರ ಬೇಕು. ಕೊಡುವುದಾದರೆ ಅವಳ ಸ್ಮೃತಿಯೊಂದನ್ನೆ ನನಗೆ ಉಳಿಸು' ಎಂದು ಕೇಳಿಕೊಂಡರು.

ಆ ಮಧುರ ನೆನಪುಗಳಲ್ಲಿ ಒಂದು ಘಟನೆಯನ್ನು ಮಾತ್ರ ಕವನರೂಪದಲ್ಲಿ ಉಳಿಸಿಕೊಟ್ಟಿದ್ದಾರೆ. 'ಪಾತರಗಿತ್ತಿ'ಯೊಂದು ಇವರ ಮಡದಿ ಮುಡಿದಿದ ಹೂವನ್ನು ಮೂಸಲೆಂದು ಬಂದಾಗ, ಕವಿ ಅದನ್ನು ಹಿಡಿದರು. ಅದರ ಗುರಿಯ ಮುಕರಿಕೆಯನ್ನು ಅವಳೆದೆಗೆ ಚುಚ್ಚಿಸಬೇಕೆಂದಾಗ, ಆಕೆ "ಬಿಟ್ಟುಬಿಡಿ ಅದನ್ನು. ತನ್ನ ಜೊತೆಗಾತಿಯ ಬಳಿ ಹೋಗಲಿ' ಎಂದು ಹೇಳಿದರಂತೆ. ಪಾತರಗಿತ್ತಿಗಳು ಮತ್ತೆ ಕೂಡಿಕೊಂಡುವು. ಅವುಗಳ ಮಿಲನಕ್ಕೆ ನಿಮಿತ್ತೆಯಾದ ತನ್ನ ಮಡದಿ ಅಗಲಿಹೋದಳು. ಅಂತೆಯೇ ಆ ಗಂಡು ಪಾತರಗಿತ್ತಿಯನ್ನು ಇನ್ನೊಮ್ಮೆ ಕಂಡಾಗ ಕವಿ "ನೀವೀರ್ವರೀಗ! ನಾನೋರ್ವನೀ ಪರಿಯೇಂ" ಎಂದು ಮನನೊಂದು ನುಡಿದರು.

ಹೋಲಿಕೆಯ ಮೂಲಕವಾದ ವಿರಹವ್ಯಥೆಯು, ಓರ್ವ ಬಾಲೆಯನ್ನು 'ನಿನ್ನ ತಮ್ಮನೆಲ್ಲಿ?' ಎಂದು ಕವಿ ಕೇಳಿದಾಗ ಮರುಕಳಿಸಿತು. ಆ ಬಾಲೆಯೊ ತನ್ನ ತಮ್ಮ ಸತ್ತುಹೋದನೆಂಬುದನ್ನೂ

ತೀರುವಷ್ಟು ಮುಗ್ಧೆ. ಕವಿಗೂ ಅಂಥ ಮುಗ್ಧ ಭಾವನೆ ಇದ್ದಿದ್ದರೆ ಅದೆಷ್ಟು ನೆಟ್ಟಗಿತ್ತು !

ಧನ್ಯೆ ಮಗು ನೀನೆನ್ನಬೇಕೆ?
ಅನಿತಣಂ ನನಗಿಲ್ಲವೇಕೆ?
ಒದಗದಕಟೆನಗಿನ್ನು ಮಾಕೆಯೇಕೆ ಕನಸಿನ ಕಾಣಿಕೆ?

ಎಂದು ಪೈಯವರು ಹಂಬಲಿಸಿದರು. ಪತ್ನಿಯ ಮರಣದಿಂದಾಗಿ, ತಮ್ಮ 'ಜೀವನದೀ ಮಧುಮಾಸವು ಬತ್ತುತ' ಬಂತೆಂದು ಭಾವಿಸಿದರು. ಚೈತ್ರ ಮಾಸದಲ್ಲಿ ಬರಬೇಕಾದದ್ದು ವಸಂತ. ಆದರೆ ಇವರ ಬಾಳಿನಲ್ಲಿ ಬಂದುದು ಗ್ರೀಷ್ಮ. ಹೀಗೆ 'ನಡುಚೈತ್ರದಿ ಮುಸಗೆ ಗ್ರೀಷ್ಮ, ಬೇಯದೆ ಮನಸು?' ಆದರೆ ಹೇಗೊ ಮಳೆ ಬಿದ್ದು ಬೆಂದ ಮನಸ್ಸು ತಂಪಾಗದೇ ಇರದು ಎಂದು ಸಮಾಧಾನ ತಾಳಿದರು. ಇವರ ಬದುಕಿನಲ್ಲಿ ಬರಬೇಕಾದ ಮಳೆ ಎಂದರೆ ಪತ್ನಿಯ ಒಲವಿನ ನೆನಹು ತಾನೇ.

ಈ ನೆನಹುಗಳ ಮೂಲಕ ತನ್ನ ಪತ್ನಿಯ ಪ್ರೇಮವು ಅದೆಷ್ಟು ಆಳವಾಗಿತ್ತೆಂಬುದನ್ನು ಅರಿತರು. ತನ್ನ ಸ್ವಾರ್ಥಮಯ ದೈಹಿಕ ಪಿಪಾಸೆಗೆ ಪ್ರತಿಯಾಗಿ ಅವಳ ತ್ಯಾಗಮಯವಾದ ಅನನ್ಯ ಪ್ರೇಮವನ್ನು ಹೋಲಿಸಿಕೊಂಡರು. ತನ್ನ ಬದುಕಿನ ಹೊಳೆಯಲ್ಲಿ ಬೆರೆಯ ಬಯಸಿದ ಅವಳ ಅರ್ಪಣ ಭಾವವು ಅವರ ಹೃದಯವನ್ನು ತಟ್ಟಿತು. 'ನಿನ್ನ ಪ್ರೇಮದಲಿ ನನಗಾಜೀವದೀಕ್ಷೆಯನ್ನೀಡು. ಬಾರೆದೆಗೆ...ಬಾ ನಿನ್ನ ಮನೆಗೆ' ಎಂದು ಉತ್ಕಂಠೆಯಿಂದ ಅವಳನ್ನು ಕರೆದು, ತನ್ನ ಹೃದಯದಲ್ಲಿ ಅವಳಿಗೆ ಚಿರಸ್ಥಾನವನ್ನಿತ್ತರು.

ಇದರಿಂದಾಗಿ ವಿರಹವು ಸಹ್ಯವಾಯಿತು. ತಮ್ಮಿಬ್ಬರ ತಾತ್ಕಾಲಿಕ ಅಗಲಿಕೆಯು ಒಂದು ದೈವೀ ಸಂಕಲ್ಪವೆಂಬ ಭಾವನೆ ಬಲವಾಯಿತು. 'ಅಶಾಶ್ವತವಾದ ಈ ಬದುಕಿನಲ್ಲಿ ಸಂತೆಗೆ ಬಂದವರ ಹಾಗೆ ಕೆಲ ಗಳಿಗೆ ಕೂಡಿ ಇದ್ದೆವು. ಅವಳು ಮುಂದೆ ಹೋದಳು, ಅಷ್ಟೆ. ನಾನೂ ಹೋಗುವವನೇ. ನಮ್ಮ 'ಕೆಳೆ'ಯು ಶಾಶ್ವತವಾದುದರಿಂದ ನಾವು ಮತ್ತೆ ಕೂಡುವುದು ಖಂಡಿತ' ಎಂದು

ನಂಬಿದರು. ಅವರ ಪ್ರೇಮವು ಹೀಗೆ ದೈವಿಕ ಸ್ವರೂಪವನ್ನು ತಾಳಿದುದರ ಪೂರ್ವ ಸೂಚನೆಯನ್ನು 'ಕಡವಿನಲ್ಲಿ' ಎಂಬ ಪದ್ಯವು ಕೊಡುತ್ತಲಿದೆ.

ಬದುಕು ಎನ್ನುವ ಸಂತೆಗೆ, ಇವರ ಪತ್ನಿ ಇವರಿಗಿಂತ ತಡವಾಗಿ ಬಂದಳಂತೆ. ಆದರೆ ತಮಗಿಂತ ಮೊದಲೇ 'ಮನೆಗೆ' ಹೊರಟು ಹೋದಳಂತೆ. ಇತ್ತ ಸಂತೆಯಲ್ಲಿ ತಾನು ಬಂದ ಕೆಲಸವಾಯಿತು. ಇನ್ನು ತಡಮಾಡಿದರೆ, 'ಮಡದಿ ನೊಂದು ಬೇಸರಳೆ?' ಎನ್ನುವ ಯೋಚನೆ ಮೂಡಿತು. ಹೀಗೆ, ಹಿಂದಿರುಗಿ ಹೋಗಲು ಕಡವಿಗೆ ಬಂದಾಗ, ದೋಣಿಯಲ್ಲಿ ಕರೆತಂದ ಅಂಬಿಗನೆ ಇಲ್ಲ.' ಕರೆದೊಯ್ಯಲು ಆತ ಯಾವಾಗ ಬರುವನೊ ತಿಳಿಯದು. ಈ ಸುಂದರವಾದ ಕವನದಲ್ಲಿ ಬರುವ ಕಡವು, ಸಂತೆ, ಅಂಬಿಗ—ಎಂಬೀ ಲೌಕಿಕ ದೃಷ್ಟಾಂತಗಳಿಂದ, ಕವನದ ಭಾವವು ಅತ್ಯಂತ ಸುಗಮವಾಗಿದೆ.

ಈ ರೀತಿಯಾಗಿ ಅವರ ಪತ್ನೀಪ್ರೇಮವು ಅಲೌಕಿಕವಾಯಿತು; ದೈವಿಕತೆಯಿಂದ ಬೆಳಗಿತು. ಪರಮಾತ್ಮನಲ್ಲಿ ತಾವು ಇಟ್ಟಿರುವ ಭಕ್ತಿಗೂ, ಪತ್ನಿಯಲ್ಲಿಯ ಅನುರಕ್ತಿಗೂ ಅಭೇದವನ್ನು ಕಲ್ಪಿಸುವಷ್ಟು ಅದು ಉದಾತ್ತವಾಯಿತು. ದಾರುಣವಾದ ವಿರಹವನ್ನು ಸಹಿಸಿಕೊಂಡು, ತಮ್ಮ ಐಹಿಕ ಪ್ರೇಮವನ್ನು ದೈವಿಕ ಪ್ರೇಮವನ್ನಾಗಿ ಮಾರ್ಪಡಿಸಿಕೊಂಡ ವ್ಯಕ್ತಿತ್ವ ಹಾಗೂ ಅದನ್ನು ಒಡಮೂಡಿಸಿ ಕವಿತ್ವ—ಇವೆರಡೂ ಅಪೂರ್ವವಾದವುಗಳೇ ಸೈ.

## ಮಾನವೀಯ ಅಂತಃಕರಣ

ಪೈಯವರ ಮನಸ್ಸು ಬಲು ಮೃದು; ಅವರ ಅಂತಃಕರಣವು ಬಲುಬೇಗ ಕರಗುವಂಥದು—ಈ ವಿಷಯ ಬಹುಶ್ರುತವಾದುದೇ. ಸಕಲ ಜೀವಿಗಳಲ್ಲಿಯ ಈ ಅನುಕಂಪವು ಅವರ ಅನೇಕ ಕವನಗಳಲ್ಲಿ ನಿಚ್ಚಳವಾಗಿ ಒಡಮೂಡಿದೆ.

ಎಲ್ಲೋ ಕೇಳಿದ ಒಂದು ಘಟನೆಯಿರಬೇಕು—ಗಂಡ ಮತ್ತು

ಮೂರು ಮಕ್ಕಳನ್ನು ಒಂದೆ ತಿಂಗಳ ಅವಧಿಯಲ್ಲಿ ಕಳೆದುಕೊಂಡ ಓರ್ವ ಸ್ತ್ರೀಯ ದಾರುಣ ಚಿತ್ರವನ್ನು ಪೈಯವರು 'ಅಂದಿ ನಿಂದಾಕೆ ನಕ್ಕಿಲ್ಲ. ಅತ್ತಿಲ್ಲ' ಎಂಬ ಪದ್ಯದಲ್ಲಿ ಕೊಟ್ಟು, ತಮ್ಮ ಅನುಕಂಪವನ್ನು ವ್ಯಕ್ತಗೊಳಿಸಿದ್ದಾರೆ. ಆ ತಾಯಿಯ ಬಡತನದ ಹಿನ್ನೆಲೆ. ಮಕ್ಕಳ ಸಾವಿನ ಮೂರು ಸನ್ನಿವೇಶಗಳು ಮತ್ತು ಅವಳ ದುಃಖದ ಬಗೆ—ಇವಿಷ್ಟನ್ನೂ ಕೇವಲ ೧೪ ಸಾಲುಗಳ ಮಿತಿ ಯಲ್ಲಿ ಚಿತ್ರಿಸುವ ಪೈಯವರ ಕವನ ಸಾಮರ್ಥ್ಯವು ಎದ್ದು ಕಾಣು ತ್ತದೆ. ಈ ರೀತಿಯ ಮಕ್ಕಳ ಸಾವನ್ನೊಳಗೊಂಡ 'ವಿದಾಯ' (ಮೂಲ ರವೀಂದ್ರರದು) ಎಂಬ ಕವನವೂ, ಪೂರ್ವೋಕ್ತ 'ಬಾಲೆ ನಿನ್ನಯ ತಮ್ಮನೆಲ್ಲಿ' ಎಂಬ ಕವಿತೆಯೂ ಮುಗ್ಧ ವಿಚಾರಗಳಿಂದ ಕೂಡಿ ಓದುಗರ ಮನಸ್ಸನ್ನು ಆರ್ದ್ರಗೊಳಿಸುತ್ತವೆ.

ಪಶುಪಕ್ಷಿಗಳಲ್ಲಿಯೂ ಪೈಯವರಿಗೆ ಅದೇ ತೆರನಾದ ಸಹೃದ ಯತೆ ಇದ್ದಿತು. ಒಂದು ಸಲ ಕೈತಪ್ಪಿ ಬೂದು ಬಣ್ಣದ ಕಿರಿಯ ಬೆರಳ ಗಾತರದೊಂದು ಮೂಕ ಜಂತುವನ್ನು ಕೊಂದರಂತೆ. ಆಗ 'ಪಶ್ಚಾತ್ತಾಪ'ದಿಂದ ಅವರ ಹೃದಯ ಕುದಿಯಿತು. 'ಅದಕೆ ಸದ್ಗ ತಿಯೂಯ ನನಗೆ ಕ್ಷಮೆಯಿರಾಯ' ಎಂದು ದೇವರನ್ನು ಪ್ರಾರ್ಥಿಸಿ ದರು. ಬೇಕೆಂದೇ ನಿಷ್ಪಾಪದ ಚಿಕ್ಕ ಪ್ರಾಣಿಗಳನ್ನು ಕೊಲ್ಲುವವರಿ ದ್ದಾರೆ. ಸಹಜವಾಗಿಯೇ ಅಂಥದೊಂದು ಪ್ರಾಣಿಯ ಹತ್ಯಕ್ಕೆ ಕಾರಣ ರಾಗಿ, ಅದಕ್ಕಾಗಿ ಎಳ್ಳಷ್ಟೂ ಕೆಡುಕೆನಿಸಿಕೊಳ್ಳದವರು ಇನ್ನೂ ಹೆಚ್ಚು ಜನರಿದ್ದಾರೆ. ಅಯ್ಯೋ ಪಾಪ, ಎಂದು ಒಂದು ಕ್ಷಣ ಮರುಗಿ ಮರೆತುಬಿಡುವವರೂ ಇದ್ದಾರೆ! ಪೈಯವರ ಹಾಗೆ. ಪಶ್ಚಾ ತ್ತಾಪಪಟ್ಟುದಲ್ಲದೆ ಯಃಕಶ್ಚಿತವಾದ ಒಂದು ಕೀಟದ ಸದ್ಗತಿ ಯನ್ನು ಬಯಸುವರೆ. ಅದಕ್ಕೆ ವಿಶೇಷವಾದ ಮನೋಭೂಮಿಕೆ ಯಿರಬೇಕು. ನಿರ್ಮಲಾಂತಃಕರಣವು ಅಂಥವರ ಹೃದಯದಲ್ಲಿ ರಸಬುಗ್ಗೆಯಂತೆ ಚಿಮ್ಮುತ್ತಿರಬೇಕಾಗುತ್ತದೆ.

ಇನ್ನೊಂದು ಜೀವಕ್ಕಾಗಿ ಹೀಗೆ ನಮ್ಮ ಹೃದಯವು ಮಿಡಿದು ದಾದರೆ ಪರಮಾತ್ಮನಿಗೆ ಅದು ಬಲು ಮೆಚ್ಚಿಕೆಯದು ಎಂಬ ಭಾವವು 'ಜೇಡನ ಬಲೆ' ಎಂಬ ಈಚಿನ ಕವನದಲ್ಲಿ ತೋರಿಬಂದಿದೆ.

ದುರಳ ಬೇಡನೊಬ್ಬನು ತನ್ನ ಕೊನೆಗಾಲದಲ್ಲಿ ಒಂದು ಜೇಡರ ಹುಳದ ಜೀವ ಉಳಿಸಿದನು. ಅವನ ಜನ್ಮದಲ್ಲಿ ಮಾಡಿದ ಒಳ್ಳೆಯ ಕೆಲಸವೆಂದರೆ ಅದೊಂದೇ. ಅಷ್ಟಕ್ಕೇ ಪ್ರೀತನಾದ ಭಗವಂತನು ಅವನನ್ನು ತನ್ನ ತೇಜೋಬ್ಧಿಯಲ್ಲಿ ಸಲಿಸಿಕೊಂಡನಂತೆ. ಇಲ್ಲಿ, ಹಲವು ತಲೆ, ಕಣ್ಣು ಕಾಲುಗಳುಳ್ಳ ಜೇಡನಿಗೂ ಸಹಸ್ರಶೀರ್ಷ, ಸಹಸ್ರಾಕ್ಷನಾದ ಭಗವಂತನಿಗೂ ಸಾಂಕೇತಿಕ ಹೋಲಿಕೆ ಇದೆ.

ಸಂತ ಏಕನಾಥನು ಇಂಥ ಮಾನವೀಯತೆಯನ್ನು ತೋರಿದ ಪ್ರತ್ಯಕ್ಷ ದೃಷ್ಟಾಂತವನ್ನು ಪೈಯವರು ಕವನಿಸಿದ್ದಾರೆ. ದೂರದ ಉತ್ತರದೇಶದ ತನಕ ಹೋಗಿ ತ್ರಿವೇಣೀ ಜಲವನ್ನು ಅವನ ಸಂಗಡಿಗರು ಹೊತ್ತು ತಂದರು. ಇನ್ನು ಆ ನೀರಿನಿಂದ, ದಕ್ಷಿಣದ ರಾಮೇಶ್ವರನಿಗೆ ಅಭಿಷೇಕ ಮಾಡಿಬಿಟ್ಟರೆ ಪುಣ್ಯ ಕಟ್ಟಿಟ್ಟಂತೆ! ಹಾಗೆ ಅವರೆಲ್ಲ ರಾಮೇಶ್ವರಕ್ಕೆ ಬಂದಾಗ, ದಾರಿಯಲ್ಲಿ ಕತ್ತೆಯೊಂದು ಸಾಯುವ ಸ್ಥಿತಿಯಲ್ಲಿದ್ದುದನ್ನು ಏಕನಾಥನು ಕಂಡು, ಮನಕರಗಿ, ಆ ತ್ರಿವೇಣಿ ಜಲವನ್ನೆಲ್ಲ ಅದಕ್ಕೆ ಕುಡಿಸಿಬಿಟ್ಟನು. ಅವನ ಸಂಗಡಿಗರು 'ಅಯ್ಯೋ, ಇದೇನು ಮಾಡಿಬಿಟ್ಟೆ?' ಎಂದು ಕೇಳಿದಾಗ ಏಕನಾಥನು 'ಕತ್ತೆಗೆರೆದೀ ಗಂಗೆಯನು ಮಿಂದನಾ ಮಂದಿರದಿ, ರಾಮೇಶನು' ಎಂದು ಸಮಾಧಾನ ಹೇಳುತ್ತಾನೆ.

ಇಂಥ ಸದ್ಭಾವ ಅಥವಾ ಅಂತಃಕರಣವು ಪ್ರಸಂಗ ಬಂದರೆ ಅದ್ಭುತವೂ, ಅಲೌಕಿಕವೂ ಆಗಿ ಪರಿಣಮಿಸಬಲ್ಲುದು. ದಕ್ಷಿಣ ಆಫ್ರಿಕದಲ್ಲಿ ಅಂಥದೊಂದು ಅಲೌಕಿಕ ಘಟನೆ ನಡೆಯಿತು. ಓರ್ವ ಪಾದ್ರಿಯು, ಸಾಯುವ ಸ್ಥಿತಿಯಲ್ಲಿದ್ದ ಮುದುಕಿಯೊಬ್ಬಳ ಮನೆಗೆ ಬಂದು ಅವಳಿಗೆ ಕೊನೆಯಂಜನವನ್ನು ಹಚ್ಚುತ್ತಾನೆ. ಆಗ ಆಕೆಯು "ನನ್ನ ಬೇನೆಯ ವಿಷಯವನ್ನು ನಿಮಗಾರು ಹೇಳಿದರು?" ಎಂದು ಅಚ್ಚರಿಗೊಂಡು ಕೇಳಿದಾಗ, ಆ ಪಾದ್ರಿಯು "ಬೆಳಿಗ್ಗೆ ಒಬ್ಬ ಯುವಕನು ನನ್ನಲ್ಲಿಗೆ ಬಂದು, ನಿನ್ನ ಬೇನೆಯ ವಿಷಯ ತಿಳಿಸಿ, ನಿನ್ನ ಮನೆಯ ಗುರುತನ್ನೂ ಹೇಳಿ ಹೋದ" ಎಂದು ನಿಜ ಸಂಗತಿಯನ್ನು ನುಡಿದು, "ಇವನೇ ಆ ಯುವಕ" ಎಂಬುದಾಗಿ ಅಲ್ಲಿಯೆ ಗೋಡೆಗೆ ತೂಗುಹಾಕಿದ್ದ, ಫೋಟೋದ ಕಡೆ ಬೆರಳು

ಮಾಡಿ ತೋರಿಸುತ್ತಾನೆ. ಮುದುಕಿಗೆ ಇನ್ನೂ ಆಶ್ಚರ್ಯ! ಏಕೆಂದರೆ ಆ ಯುವಕನು (ಅವಳ ಮಗ) ಸತ್ತು ಒಂದು ವರ್ಷದ ಮೇಲಾಗಿರುತ್ತದೆ! ಅಂತಃಕರಣದ ಅದ್ಭುತ ಸೆಳೆತಕ್ಕೆ ಮತ್ತು ದೇವನ ಲೀಲೆಗೆ ಇದು ಹಿರಿಯ ನಿದರ್ಶನವೆಂಬರ್ಥದಲ್ಲಿ ಪೈ ಯವರು ಈ ಘಟನೆಯನ್ನು ಚಿತ್ರಿಸಿದ್ದಾರೆ.

## ಯುದ್ಧ ವಿರೋಧ

ಯಾವುದೇ ಅನ್ಯಾಯದ ವಿರುದ್ಧ ಪ್ರತಿಭಟಿಸುವುದು ಮಾನವೀಯತೆಯ ಇನ್ನೊಂದು ಮುಖವಾಗಿದೆ. ಬಲಿಷ್ಠರಾದವರು ಬಲಹೀನರನ್ನು ಅನ್ಯಾಯಕ್ಕೆ ಗುರಿಪಡಿಸುವುದಾದರೆ, ಪೈಯಂಥವರ ಸದಯಾಂತಃಕರಣವು ರೋಷರೂಪವನ್ನು ತಾಳುತ್ತದೆ. ಯುದ್ಧವು ಇಂಥ ಅನ್ಯಾಯಗಳಲ್ಲಿ ಒಂದಾಗಿದೆಯಷ್ಟೆ. ಮನುಷ್ಯ ನಿರ್ಮಿತವಾದ ಇಂಥ ಪಾತಕಗಳನ್ನು, ಪೈಯವರು ಬಲವಾಗಿ ಖಂಡಿಸಿದ್ದಾರೆ. ದೂರದ ತುರ್ಕಸ್ತಾನದ ಮೇಲೆ ಇಟೆಲಿ ದೇಶವು ಏರಿಹೋದಾಗ ಪೈಯವರು ಬಲಹೀನವಾದ ತುರ್ಕಸ್ಥಾನದ ಪರವಾಗಿ ದೇವರಲ್ಲಿ ಪ್ರಾರ್ಥನೆ ಮಾಡಿದರು. ತುರ್ಕಸ್ಥಾನದಲ್ಲಿಯ ಒಬ್ಬನೇ ಒಬ್ಬ ಪ್ರಜೆಯನ್ನಾದರೂ ಪೈಯವರು ವ್ಯಕ್ತಿಶಃ ಅರಿತಿರಲಿಕ್ಕಿಲ್ಲ! ಆದರೂ ಅವರ ಮನ ಕರಗಿತು; ಹೃದಯ ಕನಲಿತು. ಮುಂದೆ ದ್ವಿತೀಯ ಮಹಾಯುದ್ಧಕಾಲದಲ್ಲಿ ಅಮೇರಿಕೆಯು ಜಾಪಾನಿನ ಹಿರೋಶಿಮದ ಮೇಲೆ ಅಣುಬಾಂಬನ್ನೆಸೆದಾಗ, ಲೆಕ್ಕವಿಲ್ಲದಷ್ಟು ನಿರಪರಾಧಿ ಜನರು ಪ್ರಾಣವನ್ನು ತೆತ್ತಾಗ, ಪೈಯವರ ಸಾತ್ವಿಕ ಚೇತನವು ಸಂತಾಪಗೊಂಡುದು ಆಷ್ಟಿಷ್ಟಲ್ಲ: 'ಲಕ್ಷಜನರಕಟ ಕರಿಮುರಿ ಜೆಂಬುವ್ರೋಗೆ ಪ್ರಕೃತಿ ಕೆಣಕಿದಳಿನ್ನು ಸುಮ್ಮನಿರುವಳಲ್ಲ... ಈ ಯುದ್ಧ ಸರ್ವಥಾಂತಿಮ ಯುದ್ಧವಲ್ಲ. ಹೊಸತೆನಿತೊ ಯುದ್ಧಗಳ ತಾಯಿ. ಮುತ್ತಾಯಿ!'

ಪೈಯವರು ಇಲ್ಲಿ ಕೊಟ್ಟ ಎಚ್ಚರದ ನುಡಿಗಳು ಸಕಾಲಿಕವೂ, ಸಾರ್ವಕಾಲಿಕವೂ ಆಗಿವೆ! ದ್ವಿತೀಯ ಮಹಾಯುದ್ಧವು ಮುಗಿದು

ಈ ನರಹತ್ಯೆ ನಿಂತಿತೆಂದು ಪೈಯವರು ಸಮಾಧಾನಪಟ್ಟರೂ, ಈ ಮನುಷ್ಯ ನಿರ್ಮಿತ ಅನ್ಯಾಯದ ಬಗ್ಗೆ ಅವರ ತಿರಸ್ಕಾರವು 'ಮುಗಿಯದ ಯುದ್ಧ' ಎಬ ಕವಿತೆಯಲ್ಲಿ ಮತ್ತೆ ಕಂಡುಬರುತ್ತಿದೆ.

ಇದೇ ಸುಮಾರಿಗೆ ಭಾರತದಲ್ಲಿ ನಡೆದ ಮನುಷ್ಯ ಮರಣಗಳು ಪೈಯವರನ್ನು ಪೆಚ್ಚು ಕಂಗೆಡಿಸಿದುವು. ಕ್ರಿ.ಶ. ೧೯೪೩ರ ಬಂಗಾಲದ ಬರಗಾಲದಲ್ಲಿ ಲಕ್ಷಗಟ್ಟಲೆ ಜನರು ಕೂಳು, ನೀರಿಲ್ಲದೆ ಕೊರಗಿ, ಮಡಿದಾಗ, ಪೈಯವರ ಅನುತಾಪವು ೩೫,೦೦,೦೦೦ ಎಂಬ ಕವನದ ಮೂಲಕ ಹೊರಹೊಮ್ಮಿತು. ಅನಂತರ ನೌಖಾಲಿಯಲ್ಲಿ, ಜಾತಿಯ ಹೆಸರಿನಲ್ಲಿ ಮನುಷ್ಯ ಮನುಷ್ಯನನ್ನು ಕೊಂದಾಗ ಕವಿವಾಣಿಯು 'ಕೇಡು ಗೆಯ್ದರ ಗೆಯ್ಸಿದರ ಬಾಯ್ಗೆ ಮಣ್ಣು ಬೀಳಲಿದೆ' ಎಂಬ ಶಾಪವಾಣಿಯಾಗಿ ಗುಡುಗಿತು.

## ಮೇಲು-ಕೀಳು

ಒಂದು ಸಮಾಜದಲ್ಲಿ ಒಬ್ಬರು ಇನ್ನೊಬ್ಬರನ್ನು ಕೀಳು ಎಂದು ತಿಳಿದು, ಅದರಂತೆ ನಡದುಕೊಳ್ಳುವುದು ಇನ್ನೊಂದು ಬಗೆಯ ಮನುಷ್ಯ ನಿರ್ಮಿತ ಅನ್ಯಾಯವಾಗಿದೆ. ಸಕಲ ಜೀವಿಗಳಲ್ಲಿ ಸಹೃದಯತೆಯನ್ನಿಟ್ಟಿರುವ ಉದಾರ ಮಾನಸರಿಗೆ ಇದೂ ಪರಿತಾಪದ ವಿಷಯವೇ ಆಗುತ್ತದೆ. ವ್ಯಕ್ತಿ ವ್ಯಕ್ತಿಗಳಲ್ಲಿ ಈ ಬಗೆಯ ಮೇಲುಕೀಳೆಂಬ ಭಾವವು, ಗಂಡು-ಹೆಣ್ಣಿನ ಭೇದ, ಜಾತಿಭೇದ, ಬಡವ-ಸಿರಿವಂತ, ದಡ್ಡ-ಬಲ್ಲಿದರೆಂಬ ಭೇದಗಳಿಂದ ಉದ್ಭವಿಸುತ್ತದೆ. ಮನುಷ್ಯನು ಎಂದಿಗೂ ಸಮಾನನು, ತನ್ನ ಮಟ್ಟಿಗೆ ಸಫಲನು—ಎಂಬ ವಿಶಾಲ ದೃಷ್ಟಿಯನ್ನು ಇಟ್ಟುಕೊಂಡಿದ್ದ ಪೈಗಳು, ಈ ಮೇಲು-ಕೀಳೆಂಬ ಭೇದ ಭಾವನೆ ತಮಗೆ ಕಂಡುಬಂದಲ್ಲೆಲ್ಲ ಅದನ್ನು ತೆಗಳಿದ್ದಾರೆ.

ಹೆಣ್ಣು ದೈಹಿಕವಾಗಿ ಅಬಲೆಯೂ, ಕಾರ್ಯತಃ ಮನೆಯಲ್ಲೇ ಇರುವವಳೂ ಎಂದಮಾತ್ರಕ್ಕೆ ಆಕೆ ಕೀಳು ಎಂದು ತಿಳಿಯಲಾಗದು. 'ಗಂಡು ಹೆಣ್ಣೆನೆ ನಾಣ್ಯದಾ ಎರಡು ಬದಿಯಂತೆ, ಗಂಡು ನಾಣ್ಯದ ಮುಂದುಗಡೆಯ ಚಿತ್ರ, ಹೆಣ್ಣು ಹಿಂಬದಿಗೆ ಟಂಕಿಸಿದ ಬರಹ'

ಎಂದು ಒಂದೆಡೆ ವಿವರಿಸಿದ್ದಾರೆ. ಸ್ತ್ರೀಗೆ ದೇವದರ್ಶನವಿಲ್ಲೆಂದು ಹೇಳಿದ ರೂಪಗೋಸ್ವಾಮಿಗೆ ಮೀರಾಬಾಯಿಯು ಕೊಟ್ಟ ಉತ್ತರದಲ್ಲಿಯೂ ಇದೇ ಭಾವವಡಗಿದೆ.

'ಜಾತಿಯಿಂದಲ್ಲ, ಗುಣದಿಂದವನು ಹೊಲೆಯ' ಎಂಬ ನಿತ್ಯ ಸತ್ಯದ ಪ್ರತಿಪಾದನೆಗಾಗಿ, ಪೈಯವರು ಕೆಲವು ಕಥನಕವನಗಳ ಮೂಲಕ, ಜಾತಿಯೆಂಬ ಮನುಷ್ಯ ನಿರ್ಮಿತ ಕಟ್ಟಳೆಗಳನ್ನು ಖಂಡಿಸಿದ್ದಾರೆ. ಪೂರ್ವಕಾಲದಿಂದ ಇದ್ದ ಆರ್ಯ–ಅನಾರ್ಯ ಭೇದವನ್ನು 'ಹೆಬ್ಬೆರಳು' ದೃಶ್ಯಕಾವ್ಯದಲ್ಲಿ ಎತ್ತಿತೋರಿಸಿ, ಅದರ ಭರತವಾಕ್ಯದಲ್ಲಿ ಈ ಬಗೆಯ ಭೇದವು ಜನಾಂಗದ ಪ್ರಗತಿಗೆ ಮಾರಕವೆಂಬುದನ್ನು ಸ್ಪಷ್ಟವಾಗಿ ಸಾರಿದ್ದಾರೆ. ಅದರಲ್ಲಿ ಬರುವ ಏಕಲವ್ಯನ ಕಥೆಯನ್ನು ಏಕನಿಷ್ಠೆ, ಗುರುಭಕ್ತಿ ಈ ದೃಷ್ಟಿಕೋನಗಳಿಂದ ನಿರೂಪಿಸಬಹುದಾದರೂ ಈ ಆರ್ಯ–ಅನಾರ್ಯ ಭೇದವನ್ನು ಚಿತ್ರಿಸಲೆಂದೇ. ಅರ್ಜುನನಿಗಿಂತ ಮಿಗಿಲಾದ ಏಕಲವ್ಯನ ಬಿಲ್ಲಾಳ್ತನಕ್ಕೆ ಅವನ ಕುಲವು ಅಡ್ಡಬರಲಿಲ್ಲವೆಂಬುದನ್ನು ಹೇಳಲೆಂದೇ ಈ ದೃಶ್ಯಕಾವ್ಯವನ್ನು ಪೈಯವರು ಬರೆದರು.

ಇಂಥದೇ ಇನ್ನೊಬ್ಬ ವ್ಯಕ್ತಿ ಕವಷ. ಋಷಿಯ ಮಗನಾದರೂ ಶೂದ್ರೆಯ ಉದರದಲ್ಲಿ ಜನಿಸಿದವ. ಅಂತಾಗಿ ಅವನನ್ನು ಇತರ ಋಷಿಗಳು ದೂರವಿಟ್ಟರು. ಅವನು ಮರುಭೂಮಿಗೆ ಹೋಗುವಂತೆ ಮಾಡಿದರು. ಅಲ್ಲಿ, ನೀರಡಿಕೆಯಿಂದ ಬಳಲಿದ ಕವಷಋಷಿಯು ಜಲಸೂಕ್ತವನ್ನು ಹೇಳಿದಾಗ, ಸರಸ್ವತೀ ನದಿಯು ಅಲ್ಲಿಯೇ ಪ್ರತ್ಯಕ್ಷವಾಯಿತಂತೆ. ಇಂಥ ಮಂತ್ರಸಾಮರ್ಥ್ಯಕ್ಕೆ ಶೂದ್ರೆಯ ಗರ್ಭವು ಅದಾವ ಅಡ್ಡಿಯನ್ನುಂಟುಮಾಡಿತು? ಹೀಗೆ ಪೈಯವರ ಸರ್ವಸಮಾನ ದೃಷ್ಟಿ, ಸಕಲ ಜೀವಿಗಳಲ್ಲಿ ಅನುಕಂಪ, ಮತ್ತು ವಿಶ್ವಬಂಧುತ್ವ ಈ ಗುಣಗಳು ಇಂಥ ಕವಿತೆಗಳಲ್ಲಿ ಚೆನ್ನಾಗಿ ವ್ಯಕ್ತವಾಗಿವೆ.

## ಜೀವನ ವಿಚಾರ

ಇಹಪರಕ್ಕೆ ಸಂಬಂಧಪಟ್ಟ ಅನೇಕ ವಿಚಾರಗಳ ಬಗ್ಗೆ ಪೈಯವರು ತಮ್ಮಲ್ಲಿಯೇ ಮಂಥನ ನಡೆಸಿದಾಗ ಹೊರಹೊಮ್ಮಿದ

ಕವಿತೆಗಳ ಬಗ್ಗೆ ಇಲ್ಲಿ ಪ್ರಸ್ತಾಪ ಮಾಡಬಯಸುತ್ತೇವೆ. ಜೀವನದ ಬಗ್ಗೆ ಪೈಯವರ ಮೂಲಭೂತ ಕಲ್ಪನೆ ಏನಿದ್ದಿತು? ಬದುಕಿನಲ್ಲಿ ಯಾವ ಅಂಶಗಳಿಗೆ ಅವರು ಮಹತ್ವ ಕೊಟ್ಟಿದ್ದರು? ಅವರು ಸ್ವೀಕರಿಸಿದ್ದ ನೀತಿ–ಮೌಲ್ಯಗಳಾವುವು—ಇವೇ ಮೊದಲಾದ ಅಂಶಗಳನ್ನು ಕೆಲಮಟ್ಟಿಗೆ ತಿಳಿಯಲು ಸಹಾಯಕಾರಿಯಾಗುವಂಥ ಪದ್ಯಗಳ ಪರಿಶೀಲನೆಯು ಅವಶ್ಯವಾದುದು. ಈ ಮುನ್ನಿನ ವಿವೇಚನೆಯಲ್ಲಿ ಇದಕ್ಕೆ ಸಂಬಂಧಿಸಿದ ಅನೇಕ ಮಾತುಗಳ ವಿವರಣೆ ಬಂದಿದೆಯಾದರೂ, ಅದಕ್ಕೆ ಪೂರಕವಾಗಿ, ತಾತ್ವಿಕ ಸ್ವರೂಪದ ಇನ್ನೂ ಕೆಲ ಮಾತುಗಳನ್ನು ಪರಿಶೀಲಿಸಬೇಕಾಗಿದೆ.

ನಮ್ಮ ಜೀವನ ಎಂದರೇನು? ಜೀವ–ದೇಹಗಳ ಕೂಡು–ಬಾಳುವಿಕೆಯೇ ತಾನೇ. ಅಶಾಶ್ವತವಾದ ದೇಹದಿಂದ ಜೀವವು ಬೇರ್ಪಟ್ಟ ಮೇಲೆ, 'ವಾಸಾಂಸಿ ಜೀರ್ಣಾನಿ ಯಥಾವಿಹಾಯ' ಎಂಬ ತೆರದಲ್ಲಿ ಜಿವಾತ್ಮವು ಮತ್ತೊಂದು ದೇಹವನ್ನು ಪ್ರವೇಶಿಸುತ್ತದೆ. ಈ ನಿತ್ಯ ಸತ್ಯವನ್ನು ಪೈಯವರು ಜೀವಾತ್ಮ ಮತ್ತು ದೇಹ ಇವುಗಳ ಪ್ರಶ್ನೋತ್ತರ ರೂಪವಾಗಿ ಮನಂಬುಗುವಂತೆ ನಿರೂಪಿಸಿದ್ದಾರೆ. ದೇಹ ಹೇಳುತ್ತದೆ: "ಎಲವೊ ಜೀವವೆ, ಅರಿಯೆನಕಟ ನೀನು ಯಾರೆಂದು—ಎತ್ತಣಿಂದ ಬಂದಿ ನೀನೆಂತು ನನ್ನೊಡನೆಂದು?....ನಾವೆಸಿತೊ ಸುಖದುಃಖ ಜೊತೆಯೊಳುಂಬುವೆವಲ್ಲ? (ಆದರೆ) ತೊಲಗುವಂದು ಕಣ್ಣು ತುಂಬುವಿಯಲ್ಲ. ಅಥವಾ ಹಿಂಗಡಿಸವಲೆ ಬೀಳ್ಕೊಳದೆ ನಡೆವೆ?" ಈ ಮಾತಿಗೆ ಉತ್ತರವಾಗಿ ಆತ್ಮನು ಹೂವಿನ ಸಾದೃಶ್ಯವನ್ನು ಕೊಡುತ್ತಾನೆ: ದೇಹವೆಂದರೆ ಹೂವಿನ ಒಡಲು. ತಾನು ಅದರ ಗಂಧ. ಅವೆರಡರ ಮೇಳವೆ ಹೂವು, ಅರ್ಥಾತ್ ಅದುವೆ ಜೀವನ—ಎಂದು.

ಜೀವನದಲ್ಲಿ ಅವರು ಯಾವುದಕ್ಕೆ ಮಹತ್ವ ಕೊಡುತ್ತಿದ್ದರೆಂಬುದಕ್ಕೆ 'ಎಲ್ಲಿ?' ಎಂಬ ಒಂದು ಚಿಕ್ಕ ಚೌಪದಿಯಲ್ಲಿ ಉತ್ತರವಿದೆ. ಯಾರು ತನ್ನಂತೆಯೇ ಇತರ ಜೀವಿಗಳು ಎಂದು ತಿಳಿಯುವರೊ, ಯಾರು ಎಲ್ಲ ಧರ್ಮಗಳಲ್ಲಿ ಹೇಳಲಾದ ದೇವರು ಒಬ್ಬನೇ ಎಂದು ಬಗೆವರೊ, ಯಾರು ತಾಯ್ನಾಡಿಗಾಗಿ ತಮ್ಮ

ಜೀವನವನ್ನು ಮುಡಿಪಿಡುವರೊ ಅವರು ಮಹಾತ್ಮರು. ಅವರಿಗೆ ಸ್ವರ್ಗವು ಭೂಮಿಯ ಮೇಲೆ ಲಭಿಸುತ್ತದೆ ಎಂದು ಅದರಲ್ಲಿ ಹೇಳಿದ್ದಾರೆ. ಸ್ವತಃ ಪೈಯವರು ಆ ಮಾರ್ಗದಲ್ಲಿ ನಡೆದವರಾಗಿದ್ದರು. ಅವರ ಈ ಜೀವನ ದೃಷ್ಟಿಯ ಮೂರೂ ಮಾತುಗಳ ವಿವರಣೆಯು ಈ ಮುನ್ನಿನ ಪುಟಗಳಲ್ಲಿ ಬಂದದ್ದೇ ಇದೆ.

ಆದರೆ ಇವುಗಳ ಸಾಧನೆಗಾಗಿ ಪ್ರಯತ್ನವು ಬೇಕು. ಜೀವನದಲ್ಲಿ ಒಳ್ಳೆಯದಕ್ಕಾಗಿ ಹೋರಾಡಬೇಕಾಗುತ್ತದೆ. ಅದಕ್ಕಾಗಿಯೇ ನಾವು ಬಾಳಬೇಕು ಎಂದು ಪ್ರತಿಪಾದಿಸಿದ್ದಾರೆ. 'ಯಾರೆಂಬರು ಮುಗಿದುದೆಂದು ಬವರಂ? ಲೋಕದ ಕಷ್ಟ ನಿವಾರಣೆಯ ಹೋರಾಟಕ್ಕೆ ಮುಗಿತವೆ ಇಲ್ಲ. ಶಾಂತಿಯೆ ನಿನ್ನಯ ಸಾಧನವಾಗೆ ಸದಾ ಸಿದ್ಧವಿರು, ಯುದ್ಧಕೆ ಸಾಗೆ' ಎಂಬ ಕರೆಯನ್ನಿತ್ತಿದ್ದಾರೆ. 'ನಂದಾದೀಪ'ದ ಒಂದು ಪದ್ಯದಲ್ಲಿಯೂ ಇದೇ ವಿಚಾರವಿದೆ (ನಾವೆ ನಮಗಾಗಿಸುವೆವೆಮ್ಮ ಕೋಟಲೆಯ). ನಮ್ಮ ಬದುಕಿಗೆ ದೇವರೇ ಕಾರಣನು, ಅವನದೇ ಎಂಬುದಾಗಿ ನಾವು ನಂಬಬೇಕು. ಹಾಗೆ ನಂಬುವುದೆಂದರೆ ವಿಧಿಗೆ ಶರಣಾಗಿ ಕೈಕಟ್ಟಿಕೊಂಡು ಸುಮ್ಮನೆ ಕುಳ್ಳಿರುವುದಲ್ಲ. ಅದು, ತನ್ನಾಯುಧದಿಂದ ತಾನೆ ಮಡಿದಂತೆ! ಕಾರಣ, 'ವಿಧಿಯು ಎದೆ ಎಂಬ ಕಲ್ಲಿನ ಮೇಲೆ ನಿನ್ನ ಹೆಸರನ್ನು ಕೊರೆದು, ನಿನ್ನ ತನವನ್ನು ಮೆರೆಯು' ಎಂದು ಉಪದೇಶಿಸಿದ್ದಾರೆ. ಇದಕ್ಕಾಗಿ ನಾವು ಸಮಯ ಕಾಯ್ದಿರಬೇಕು. ಅಂಥ ಸದವಕಾಶವು ಯಾವಾಗ ಬಂದೀತೆಂದು ಹೇಳಲು ಬಾರದು. 'ನಾನೊಂದು ಸಲ ಬರುವೆ ಕದ ತಟ್ಟಿ, ನೀನೊಳಗೆ ಇಲ್ಲದಿರೆ ತೊಲಗಿದಪೆ ಮತ್ತೆ ನಾ ಮರಳೆ' ಎಂದು ಈ ವೇಳೆ ಅಥವಾ ಅವಕಾಶವು (opportunity) ನಮ್ಮನ್ನು ಎಚ್ಚರಿಸುತ್ತದೆ!

ಪೈಯವರ ಎಲ್ಲ ಕವಿತೆಗಳೂ ಸ್ವನಿಷ್ಠವಾದುವು(subjective). ಎಂದರೆ ಯಾವುದೇ ಘಟನೆ ಅಥವಾ ವಿಚಾರವನ್ನು ಕವನರೂಪದಲ್ಲಿ ಮೂಡಿಸುವದಾದಲ್ಲಿ, ಅವರ ಬುದ್ಧಿ ಮತ್ತು ಹೃದಯಗಳಲ್ಲಿ ಅದರ ಮಂಥನ ನಡೆದ ಮೇಲೆಯೇ ಕವಿತಾ ಸೃಷ್ಟಿ

ಯಾಗುತ್ತಿತ್ತು. ಇಷ್ಟೇ ಅಲ್ಲ, ತಮ್ಮ ಜೀವನದಲ್ಲಿ ಅಳವಡಿಸಿ
ಕೊಂಡ, ದೈವಭಕ್ತಿ, ದೇಶಸೇವೆ, ಮಾನವೀಯ ಅನುಕಂಪ ಇತ್ಯಾದಿ
ನೆಲೆಬೆಲೆಗಳನ್ನು ವ್ಯಕ್ತಪಡಿಸುವ ಕವನಗಳನ್ನೆ ಅವರು ಬರೆವರು.
ಹೀಗೆ ಅವರ ಜೀವನದೃಷ್ಟಿಯೂ ಕಾವ್ಯದೃಷ್ಟಿಯೂ ಒಂದೇ
ಆಗಿದ್ದಿತು.

ಪೈಯವರ ಕವನಗಳು ಅತ್ಯಂತ ಉದಾತ್ತ ವಿಚಾರಗಳನ್ನು
ಒಳಗೊಂಡಿದ್ದರೂ ಸ್ವಂತದ ಕಾವ್ಯಸೃಷ್ಟಿಯ ಬಗ್ಗೆ ಅವರು
ಅತ್ಯಂತ ಶಾಲೀನರಾಗಿದ್ದರು. ಅವರ ಸ್ವಭಾವದ ನಮ್ರತೆಯು,
ಇಲ್ಲಿಯೂ ವ್ಯಕ್ತವಾಯಿತೆಂದು ಹೇಳಬೇಕು. ತಾನು ಹಾಡುವುದೆ
ವಿಧಾತೃವಿನ ಅಣತಿಯಿಂದ; ಅವನ ಕೃಪೆಯಿಂದ—ಆದ್ದರಿಂದ
ಈ ಕವಿತೆಗಳು ತನ್ನವೇ ಎಂಬ ಅಭಿಮಾನ ಅವರಿಗೆ ಇದ್ದಿರಲಿಲ್ಲ.
ಗಿಳಿಗಳು ಕೆಲಹೊತ್ತು ತೋಟದಲ್ಲಿ ಬಂದು, ಉಲಿದು ಹೋದಾ
ಕ್ಷಣ ಆ ಗಿಳಿವಿಂಡು ತೋಟಿಗನದೇ ಆದೀತೆ? ಹಾಗೆಯೇ ತಮ್ಮ
ಎದೆಗೂಡಿನಲ್ಲಿ ಕೆಲಕಾಲ ನಿಂತು, ಹೊರಹೊಮ್ಮಿದ ಈ ಕಾವ್ಯಾಂಶ
ಗಳು 'ನನ್ನವಲ್ಲ, ಭಗವಂತನವು' ಎಂಬುದಾಗಿ ಪೈಯವರು
ಆಳವಾಗಿ ನಂಬಿದ್ದರು. ಅತ್ಯಂತ ಅಪೂರ್ವವಾದ ಈ ನಮ್ರ
ಭಾವವನ್ನು ಅದೆಷ್ಟು ಎತ್ತಿ ಹಿಡಿದರೂ ಕಡಿಮೆಯೇ.

ಈ ನಮ್ರ ಭಾವವು 'ಬಲ್ಲುದೆ ಲತೆ ಫಲಂ ತನ್ನ' ಎಂಬ
ಕವನದಲ್ಲಿ ಇನ್ನಷ್ಟು ಹೃದ್ಯವಾಗಿ ಒಡಮೂಡಿದೆ. ತಾನು ಬಿಟ್ಟ
ಫಲವು ಸಣ್ಣ. ದೊಡ್ಡದೇ ಇರಲಿ, ಅಥವಾ ಸಿಹಿ–ಕಹಿಯೇ
ಇರಲಿ, ಲತೆಯು ಅದನ್ನು ಬಲ್ಲುದೆ? ಆ ಫಲದ ಗುಣದೋಷ
ಗಳ ಗೊಡವೆ ಅದಕ್ಕಿಲ್ಲ. ಅನ್ಯರ ಹೊಗಳಿಕೆ ತೆಗಳಿಕೆಗಳ ಲೇಪವೂ
ಅದಕ್ಕಿಲ್ಲ. ಯಾರು ಏನು ಹೇಳದಿದ್ದರೂ ಕಾಲನೆಂಬ ಗಾಳಿ ಬೀಸಿ,
ಅದು ಭೂಮಿತಾಯಿಗೆ ಅರ್ಪಿತವಾದರೆ ಅಷ್ಟೇ ಸಾಕು. ಆ ಲತೆ
ಫಲವನ್ನು ಹೆತ್ತು, ಹೊತ್ತುದು ಸಾರ್ಥಕವೇ. ಈ ಪದ್ಯದಲ್ಲಿ
ಬರುವ—'ಬಗೆದಂತೊದಗಿಸಲು ಬನ್ನವೇನೊ ಬಳ್ಳಿಯಾ?
ಹಲವೊ ಕೆಲವೊ ಸವಿದು ಹಣ್ಣು, ಸಿಹಿಯಾದೊಡೆ ಕೊಳುವುದಣ್ಣ
ಕಹಿಯಾದೊಡೆ ಕಳೆವುದಣ್ಣ ಲತೆಯು ತಿಳಿಯಾ' ಎಂಬ ಮಾತು

ಗಳು ಕಾವ್ಯದ ಫಲಶ್ರುತಿಯುಂತಿವೆ. ಈ ನಮ್ರತೆ, ನಿರ್ಲಿಪ್ತತೆಯ ಮನೋಭಾವವು ಅವರ ಜೀವನದಲ್ಲಿಯೂ ಕಾಣಬಂದುದೇ ಆಗಿದೆ. ಅವರು ಜೀವನದಲ್ಲಿ ಕಂಡದ್ದನ್ನೆ, ಪ್ರಾಮಾಣಿಕವಾಗಿ ಅನಿಸಿದ್ದನ್ನೆ ಕಾವ್ಯದಲ್ಲಿ ಒಡಮೂಡಿಸಿದರು. ಕಾವ್ಯವನ್ನೆ ಬಾಳಿದರು. ಇಂಥವರನ್ನು ಕಾವ್ಯರ್ಷಿಯೆನ್ನದೆ ಇನ್ನಾರನ್ನು ಹೇಳಲಾದೀತು?

## ಸಮಾರೋಪ

ಪೈಯವರ ಕಾವ್ಯಸೃಷ್ಟಿಯನ್ನು ಮೊತ್ತದಲ್ಲಿ ಪರಿಶೀಲಿಸಿದಾಗ ಮೂರು ಲಕ್ಷಣಗಳು ನಮ್ಮ ಗಮನಕ್ಕೆ ಬರುತ್ತವೆ. ಒಂದನೆಯದು ಆ ಸೃಷ್ಟಿಯ ಆಳ ಮತ್ತು ವಿಸ್ತಾರ, ಎರಡನೆಯದು ಅವರ ಸ್ವತಂತ್ರ ವೃತ್ತಿ, ಮೂರನೆಯದಾಗಿ ಬಂಧದ ಕ್ಲಿಷ್ಟತೆ.

ಅವರ ಕವಿತೆಗಳಲ್ಲಿ ಬಂದಿರುವ ವಿಚಾರಗಳು ವಿಶೇಷ ಚಿಂತನದಿಂದ ಕೂಡಿದುವಾಗಿ, ಅವುಗಳ ಅರ್ಥವು ಆಳವಾದುದೆಂಬುದನ್ನು ಈಗಾಗಲೇ ಗಮನಿಸಿದ್ದೇವೆ. ವಿಷಯದ ವೈವಿಧ್ಯ-ವಿಸ್ತಾರಗಳೂ ಅಷ್ಟೇ ಗಮನಾರ್ಹವಾಗಿವೆ. ದೇವರ ಅಸ್ತಿತ್ವ, ಮುಕ್ತಿ ವಿಚಾರಗಳಿಂದ ಹಿಡಿದು, ಮಿಂಚುಹುಳದ ವರೆಗೂ ವಸ್ತುವಿನ್ಯಾಸ ಹರಡಿದೆ. ನಾಲ್ಕೇ ಸಾಲಿನ ಚಿಕ್ಕ ಗೀತದಿಂದ ಹಿಡಿದು ೧೪೦೦ ಸಾಲಿನ ಖಂಡಕಾವ್ಯವನ್ನು ಅವರು ಬರೆದಿದ್ದಾರೆ. ಕಾವ್ಯ ಪ್ರಕಾರವೊ, ಕಂದ, ಷಟ್ಪದಿ, ಸಂಸ್ಕೃತ ವೃತ್ತ, ಸರಳರಗಳೆ, ಚೌಪದಿ, ಚತುರ್ದಶಪದಿ, ಹಾಡು, ಕೀರ್ತನೆ, ಇವು ಎಲ್ಲವನ್ನೂ ಅವರು ಬಳಸಿದ್ದಾರೆ. ಧಾಟಿಯಾದರೂ ಹಾಗೆಯೇ; ಒಮ್ಮೆ ಬಂಗಾಲೀ ಗೀತದ ಧಾಟಿಯನ್ನು ಅನುಕರಿಸಿದರೆ ಮತ್ತೊಮ್ಮೆ ತ್ಯಾಗರಾಜ ಕೃತಿಯದು. ಭೂಪಾಳಿ, ಬೇಹಾಗ್, ಮುಂತಾದ ರಾಗಗಳ ಜೊತೆಗೆ, ಗಝಲ್ ಇದೆ; ದೇವರನಾಮದ ಧಾಟಿಯ ಪದ್ಯಗಳೂ ಇವೆ.

ಇದರ ಮೂಲಕಾರಣವೆಂದರೆ ಅವರ ಕವಿತ್ವವು ಅಕ್ಷರಶಃ ಸಹಜ ಸ್ಫುರಣವಾದುದಾಗಿದ್ದಿತು. ಆ ಸುಮುಹೂರ್ತದಲ್ಲಿ

ಧಾಟಿಯಾಗಲೀ ವೃತ್ತವಾಗಲೀ, ತಾನಾಗಿ ಹೊರಹೊಮ್ಮಿ ವಿಷಯಕ್ಕೆ ಅನುಗುಣವಾದುದೇ ಇರುತ್ತಿದ್ದಿತು. ಹೀಗೆ ಸಹಜ ವಾಗಿ ಹೊರಹೊಮ್ಮಿದ ಕಾವ್ಯದ ರಚನೆಯಲ್ಲಿ ಸ್ವತಂತ್ರ ಭಾವ ವಿರುವುದು ಅಚ್ಚರಿಯೇನೂ ಅಲ್ಲ. ಹೊಸಗನ್ನಡ ಕವಿತೆಯ ಅಂಗಾಂಗಗಳು ಮೂಡದಿದ್ದ, ಅದರ ಅವತಾರಪೂರ್ವದ ಕಾಲ ದಲ್ಲಿಯೇ ಪೈಯವರು ದ್ವಿತೀಯ ಪ್ರಾಸವನ್ನು ಬಿಡುವ ಎದೆ ಗಾರಿಕೆಯನ್ನು ತೋರಿದರು. ಜೊತೆಗೆ, ೧೯೪೭ರಷ್ಟು ಈಚೆಗೆ, ಅದೂ ಭಾರತದ ಸದ್ಯದ ರಾಜಕೀಯ ವಿಷಯವುಳ್ಳ ಪದ್ಯವನ್ನು ಹಳಗನ್ನಡದ ಶಾರ್ದೂಲವಿಕ್ರೀಡಿತವೃತ್ತದಲ್ಲಿ ಬರೆದಿದ್ದಾರೆ! ಚತುರ್ದಶಪದಿಯನ್ನು (sonnet) ಪ್ರಚುರಪಡಿಸಿದವರಲ್ಲಿ ಅವರು ಅಗ್ರಗಣ್ಯರಾಗಿದ್ದಂತೆಯೇ, ಅಷ್ಟಾದಶಪದಿಯ ಪ್ರಯೋಗ ವನ್ನು ಅವರು ಮಾಡಿದ್ದಾರೆ. ಏಕಲವ್ಯನ ಕತೆಯಂತಹ ಹಳೆಯ ವಸ್ತುವನ್ನು ಕಾವ್ಯಕ್ಕೆ ಆರಿಸಿಕೊಂಡು, ಇಂದಿನ ಭಾರತದ ಜಾತಿ–ಭೇದ ಜಾಡ್ಯವನ್ನು ಪರಿಹರಿಸುವ ಉದ್ದೇಶವನ್ನಿಟ್ಟುಕೊಂಡರು. ತುರ್ಕಿ–ಇಟಲಿಗಳ ಯುದ್ಧವನ್ನು ಕವನದ ವಸ್ತುವನ್ನಾಗಿ ಆಯ್ದು ಕೊಂಡರೂ, ಅದರ ಪರಿಹಾರಕ್ಕಾಗಿ ದೇವರ ಮರೆಹೊಕ್ಕಿದ್ದಾರೆ. ಅವರ ಕವನದ ವಸ್ತುವಿನಲ್ಲಿ, ಬಂಧದಲ್ಲಿ ಯಾವ ನಿರ್ಬಂಧವೂ ಇಲ್ಲ. ಭಾವನಿರ್ಭರವೊಂದನ್ನೆ ನಾವು ಅಲ್ಲಿ ಕಾಣುತ್ತೇವೆ.

ಇನ್ನುಳಿಯಿತು ಪೈಯವರ ಕವನಗಳ ಕ್ಲಿಷ್ಟತೆ! ಅವರ ಬರವಣಿಗೆಯ ಗಡಸುತನದ ಬಗೆಯನ್ನು ಸಂಶೋಧನ ಪ್ರಬಂಧ ಗಳ ಸಮಾರೋಪ ಮಾಡುವಾಗ ವಿವರಿಸಿದ್ದೇವೆ. ಅಲ್ಲಿ ಹೇಳಿದ ಮಾತುಗಳೇ ಇಲ್ಲಿಯೂ ಸಲ್ಲುತ್ತವೆ. ಕನ್ನಡ ಕಾವ್ಯವೆಂದರೆ ಮೊನ್ನೆ ಮೊನ್ನೆ ಪ್ರವಹಿಸತೊಡಗಿದ ಚಿಕ್ಕ ಝರಿಯಲ್ಲ. ಸಾವಿರ ವರ್ಷಗಳಿಂದ ಹರಿದುಬಂದ ಹೆದ್ದೊರೆಯಾಗಿದೆ. ಅದೆಷ್ಟು ಜನ ಮಹಾನ್ ಕವಿಗಳು ಅದನ್ನು ಸಮೃದ್ಧವಾಗಿಸಿದ್ದಾರೆ! ಆ ವಾಹಿನಿಯಲ್ಲಿಯೇ ಮುಳುಗಿ, ಈಸುವ ಸಾಮರ್ಥ್ಯವನ್ನೂ ಪಡೆ ದಿದ್ದ ಪೈಯವರ ಕವಿತೆಯು ಈಗಿನ ರೂಪ ಧಾರಣೆ ಮಾಡದೆ ಇನ್ನಾವ ಸ್ವರೂಪ ಹೊಂದೀತು? ನೆಲದ ಮೇಲೆಯೇ ಪ್ರಾಕ್ಟೀಸು

ಮಾಡಿ, ಈಸು ಕಲಿಯುತ್ತಿದ್ದೇನೆಂದು ತಿಳಿದವರು, ನೀರಲ್ಲಿ ಇಳಿಯುವುದಕ್ಕೂ ಅಂಜುವವರೇ! ಕವಿತೆಯು ಇಷ್ಟು ಸುಲಭ ಗಾಮಿಯಾಗಬೇಕೆಂದು ಬಯಸುವವರಿಗೆ ಗೋವಿಂದ ಪೈಯವರ ಕವನವಾಹಿನಿಯಲ್ಲಿ ಹರಿದಾಡುವುದು ಕಷ್ಟಕರವೇ.

---

## ಡಾ। ಶ್ರೀನಿವಾಸ ಹಾವನೂರ ಕೃತ:

೧. ಹೊಸಗನ್ನಡದ ಅರುಣೋದಯ (ಮಹಾಪ್ರಬಂಧ)

೨. ಕನ್ನಡದಲ್ಲಿ ಕ್ರೈಸ್ತಸಾಹಿತ್ಯ, ಹನಿಗತೆ, ಕಂಪ್ಯೂಟರ್ ಇ.

೩. ಮಾತಂಗಿ ಮತ್ತು ಇತರ ಕಾದಂ.–ಕಥನಗಳು.

೪. ಕುಚೋದ್ಯದ ಕಥೆಗಳು.